# ಧರ್ಮದರ್ಶಿ



ನಿಸರ್ಗದ ಮಡಿಲ್ಲಿ ಚೆನ್ನಬಸವೇಶ್ವರ ಗದ್ದುಗೆ, ದೇವಾಲಯ.

ಲಕ್ಕಪ್ಪ ಅ. ಶಿರಹಟ್ಟಿ

ಶ್ರೀ ಜಗದ್ಗುರು ವಿಶ್ವಾರಾಧ್ಯ ಜ್ಞಾನ ಸಿಂಹಾಸನಾಧೀಶ್ವರ

ಶ್ರೀ ೧೦೦೮ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ
ಮಹಾಸ್ವಾಮಿಗಳವರು

ಜಂಗಮವಾಡಿ ಸಂಸ್ಥಾನಮಠ ಶ್ರೀ ಕಾಶಿ ಕ್ಷೇತ್ರ.

ಮಹಾಸನ್ನಿಧಿಯ ಚರಣಕಮಲಗಳಿಗೆ ಭಕ್ತಿಸುಮವನ್ನ
ಅರ್ಪಿಸಲ್ಪಟ್ಟಿದೆ.

ಅಗರಖೇಡ. ತಾ-ವಿಜಾಪುರ
೭-೯-೧೯೭೭

ತಮ್ಮ ಸೇವಕ
ಲಕ್ಷ್ಮಿ [illegible]

# ಧರ್ಮದರ್ಶಿ

## (ಚೆನ್ನಬಸವಣ್ಣನವರ ಚರಿತ್ರೆ)

—§§§—

ಶಿವ ತತ್ತ್ವಾಮೃತಾಸ್ವಾದ ಚೇತಸೇ ಯೋಗಿನೇ ನಮಃ
ಶ್ರೀ ಚೆನ್ನಬಸವೇಶಾಯ ಷಟ್‌ಸ್ಥಲ ಬ್ರಹ್ಮವಾದಿನೇ

ಮರಿತೋಂಟದಾರ್ಯರು.
(ವೀರಶೈವಾನಂದ ಚಂದ್ರಿಕೆ ಕರ್ತೃ)



ಲೇಖಕರು:
ಲಕ್ಕಪ್ಪ ಅ. ಶಿರಹಟ್ಟಿ
೧೯೭೫

ಪ್ರಕಾಶನ
ಅರುಣೋದಯ ಪ್ರಕಾಶನ
ಭಗತಸಿಂಗಗೋಡ, ವಿಜಾಪುರ



ಆಶ್ರಯ:
ಶ್ರೀ ಬಿ. ಪಿ. ಹಿರೇಮಠ
ಪೇಪರ ಮರ್ಚಂಟ ವಿಜಾಪುರ




ಪ್ರತಿಗಳು: ೧೦೦೦
ಬೆಲೆ. ರೂ- ೩-೫೦

ಅಚ್ಚು:
ಶ್ರೀ ಸದ್ಗುರು ಶಿವಾನಂದ ಮುದ್ರಣಾಲಯ
ವಿಜಾಪುರ.

# ಮುನ್ನುಡಿ

ವಯೋವೃದ್ಧ, ಜ್ಞಾನವೃದ್ಧ ಶ್ರೀ ಲಕ್ಕಪ್ಪ ಶಿರಹಟ್ಟಿ ಇವರು, ಶಿವ ಶರಣರ ಜೀವನ ಸಾಧನೆ ಸಂದೇಶಗಳನ್ನು ಕುರಿತು ತಮ್ಮ ಕೆಲವು ಕೃತಿಗಳ ಮೂಲಕ ಹೆಸರುವಾಸಿಯಾಗಿದ್ದಾರೆ. ನಿಷ್ಠಾಯುಕ್ತವಾದ ಅಭ್ಯಾಸ, ಪರಿ ಣಾಮ ಕಾರಿಯಾದ ನಿರೂಪಣೆ, ರಮ್ಯಭಾಷಾಶೈಲಿಗಳಿಂದಾಗಿ ಅವರ ಕೃತಿ ಗಳು ಜನಮೆಚ್ಚುಗೆಯ ಪಡೆದಿವೆ. ಪಾರಿತೋಷಕಕ್ಕೂ ಪಾತ್ರವೆನಿಸಿವೆ. ವಚನಸಾಹಿತ್ಯ, ವೀರಶೈವಕಾವ್ಯ, ಐತಿಹಾಸಿಕ ಸಾಮಗ್ರಿಗಳ ಗಟ್ಟಿಯಾದ ತಳಹದಿಯ ಮೇಲೆ ಇವರ ಕೃತಿಗಳು ರೂಪಗೊಂಡಿವೆ. ಅಲ್ಲದೆ ಸಮಂಜಸ ವಾದ ಕಲ್ಪಕತೆಯೂ ಅಲ್ಲಿ ಕಂಡುಬರುತ್ತದೆ. ಶರಣಧರ್ಮದ ಸಂದೇಶ ವನ್ನು ಸರಿಯಾಗಿ ಅರ್ಥಯಿಸಿಕೊಂಡು, ಅದನ್ನು ತಮ್ಮನಿತ್ಯದ ಬಾಳಿನಲ್ಲಿ ರೂಢಿಸಿಕೊಳ್ಳುವಲ್ಲಿ ಶಿರಹಟ್ಟಿಯವರು ನಿರತರಾಗಿದ್ದಾರೆ. ಅಂತೆಯೇ ಅವರ ಕೃತಿಗಳಿಗೆ ಸತ್ಯಪೂರ್ಣತೆಯುಂಟಾಗಿದೆ. ಹೀಗೆ ರೂಪಗೊಂಡ ಸಿದ್ಧರಾಮ, ಬಸವಣ್ಣ, ಅಕ್ಕನಾಗಮ್ಮ, ಮೋಳಿಗೆಯ ಮಾರಯ್ಯ ಅವರ ಚರಿತ್ರೆಗಳ ಮಾಲೆಯು ಈಗಿನ 'ಧರ್ಮದರ್ಶಿ' ಕೃತಿಯಲ್ಲಿ ಮುಂದುವರಿದಿದೆ.

ಈ ಕೃತಿಯಲ್ಲಿಯ ಧರ್ಮದರ್ಶಿಯೆಂದರೆ ಷಟ್‌ಸ್ಥಲ ಚಕ್ರವರ್ತಿ, ಸುಜ್ಞಾ ನನಿಧಿ ಚೆನ್ನಬಸವಣ್ಣ! ಒಂದು ದೃಷ್ಟಿಯಿಂದ ಇದು 'ಕ್ರಾಂತಿಗಂಗೋತ್ರಿ'ಯ ಮುಂದಿನ ಭಾಗ! ಇನ್ನೊಂದು ದೃಷ್ಟಿಯಿಂದ ಶಿವಶರಣರ ಸಮೂಹದ ಬದುಕಿನ ಹಿನ್ನೆಲೆಯ ಸೂತ್ರ! ಇಲ್ಲಿ ಒಡಮೂಡಿ ಬಂದ ಚಿತ್ರ ಸುಂದರವಾಗಿದೆ.

ಶಿಶು ಚೆನ್ನಬಸವಣ್ಣನ ನಾಮಕರಣದ ಸನ್ನಿವೇಶದಿಂದ ಈ ಕೃತಿ ಆರಂಭವಾಗುತ್ತಿದೆ. ತೊಟ್ಟಿಲಲ್ಲಿಯೇ ಪರಿಮಳ ಬೀರಿದ ಬಾಲಕ ಚೆನ್ನಬಸ ವಣ್ಣ, ಅನುಭವ ಮಂಟಪದ ಕಾರ್ಯಕಲಾಪ, ಆಳರಸರೊಂದಿಗೆ ಉಂಟಾದ ವಿರಸ, ಅನುಭವಮಂಟಪವು ಕಲ್ಯಾಣದಲ್ಲಿ ಒಡೆದ ನಂತರ ಶರಣರು ಅನಿವಾರ್ಯ ವಾಗಿ ಎದುರಿಸಬೇಕಾದ ಹೋರಾಟ-ಇವು ಈ ಕೃತಿಯ ಕೇಂದ್ರ ವಿಷಯಗಳು. ಕಲ್ಯಾಣದಲ್ಲಿ ಒಡೆದ ಪ್ರಣತಿಯನ್ನು ಉಳಿವೆಯಲ್ಲಿ ಹೊಂದಿಸಿ ಮತ್ತೆ ಹೊತ್ತಿ ಸಿದ ಬಗೆ, ಚೆನ್ನಬಸವಣ್ಣನವರ ಅಂತ್ಯಗಳೊಂದಿಗೆ ಈ ಚರಿತ್ರೆ ಮುಕ್ತಾಯ

ಗೊಳ್ಳುತ್ತಿದೆ. ಕೊನೆಯ ಅಧ್ಯಾಯದಲ್ಲಿ ಚೆನ್ನಬಸವಣ್ಣನ ವ್ಯಕ್ತಿತ್ವದ ಹಿರಿಮೆಯನ್ನು ಗುರುತಿಸಿ, ಪರಿಷ್ಕೃತ ವೀರಶೈವ ಅರ್ಥಾತ್ ಶರಣಧರ್ಮದ ವೈಶಿಷ್ಟ್ಯವನ್ನು ತುಲನಾತ್ಮಕವಾಗಿ ನಿರೂಪಿಸಲಾಗಿದೆ. ಚೆನ್ನಬಸವಣ್ಣನ ಚರಿತ್ರೆಯೊಂದಿಗೆ ಬಸವಣ್ಣನ ಚರಿತ್ರೆಯ ಪ್ರವಾಹವೂ ಸಮಸಮವಾಗಿ ಇಲ್ಲಿ ಹರಿದು ಬಂದಿರುವದು ಸ್ವಾಭಾವಿಕವೇ ಆಗಿದೆ. ಅಕ್ಕನಾಗಮ್ಮನ ವ್ಯಕ್ತಿತ್ವದ ಪ್ರಭಾವವು ಇಲ್ಲಿ ಹಿನ್ನೆಲೆಯನ್ನು ಒದಗಿಸಿದೆ. ಬಸವಣ್ಣ-ಚೆನ್ನಬಸವಣ್ಣರ ಪರಸ್ಪರ ಸಂಬಂಧದ ಸೂಕ್ಷ್ಮತೆಯನ್ನು ಲೇಖಕರು ಸಮರ್ಪಕವಾಗಿ ಚಿತ್ರಿಸುತ್ತ ಗುರುವಿನ ಮಹತಿಯನ್ನು ಬಣ್ಣಿಸಿದ್ದಾರೆ. ಅನುಭವ ಮಂಟಪದ ಅಧ್ಯಕ್ಷ ಪ್ರಭುದೇವನ ಪ್ರಭೆ, ಇನ್ನಿತರ ಶರಣರ ಸಮಯೋಚಿತ ಉಲ್ಲೇಖಗಳು ಇಲ್ಲಿವೆ. ಸಂದರ್ಭಾನುಗುಣವಾಗಿ ಬಂದಿರುವ ವಚನಗಳ ಅವತರಣಿಕೆಗಳು ವಚನ ಸಾಹಿತ್ಯದ ಪ್ರಭೆಯನ್ನು ಹೊರಹೊಮ್ಮಿಸುವಂತಿವೆ. ಕಲ್ಯಾಣದಿಂದ ಉಳಿವೆಯತ್ತ ಶರಣರು ಸಾಗಿದ ಮಾರ್ಗದ, ಪ್ರಯಾಣದಲ್ಲಿ ಅವರು ತಂಗಿದ ತಾಣಗಳ ವಿವರಗಳಲ್ಲಿ ಸಂಶೋಧನ ಸಾಮಗ್ರಿಯಿದೆ.

ಚೆನ್ನಬಸವಣ್ಣನ ಚರಿತ್ರರೂಪವಾಗಿರುವ ಈ ಕೃತಿಯಲ್ಲಿ ವೀರಶೈವ ದರ್ಶನದ ತಿರುಳು, ಕೆಲಮಟ್ಟಿಗೆ ಆ ಧರ್ಮದ ಚರಿತ್ರೆ ನಿರೂಪಿತವಾಗಿದೆ. ಶಿವಶರಣರು ಉದಯವಾದ ಕಾಲದಲ್ಲಿ ಕರ್ಮಕಾಂಡಿಗಳ ಡಂಭಾಚಾರ ಶೋಷಣೆ, ಹಿಂಸೆಗಳ ತಾಂಡವ ನಡೆದಿತ್ತು. ಅದರಿಂದಾಗಿ ಅಂದಿನ ಸಾಮಾಜಿಕ ಜೀವನದಲ್ಲಿ ಶೈಥಿಲ್ಯ-ವೈಷಮ್ಯಗಳು ತಲೆದೋರಿದ್ದವು. ಸಾಂಪ್ರದಾಯಿಕ ಶೈವಧರ್ಮವು ಅಷ್ಟೊಂದು ತೃಪ್ತಿಕರವಲ್ಲದ ಮೋಕ್ಷದ ಅಪೇಕ್ಷೆಗೆ ಅಂಟಿಕೊಂಡಿತ್ತು. ಶೈವದಲ್ಲಿಯೂ ವಾಮಮಾರ್ಗಾವಲಂಬಿಗಳು ಇದ್ದರು. ಕರ್ಮಕಾಂಡದ ಪ್ರಭಾವಕ್ಕೆ ಒಳಗಾದವರೂ ಇದ್ದರು. ಇಂತಹ ಪರಿಸ್ಥಿತಿಯಲ್ಲಿ ಶರಣರು ಜನತಾಧರ್ಮವನ್ನು ರೂಢಿಸುವ ಕಾರ್ಯಕ್ಕೆ ಅಣಿಯಾದರು. ಸ್ವಾತಂತ್ರ್ಯ, ಸಮತೆ, ಬಂಧುತ್ವಗಳ ತಳಹದಿಯ ಮೇಲೆ ಸರಳವಾದ ಪರಿಶುದ್ಧವಾದ ಧರ್ಮದ ಹಾದಿಯನ್ನು ಜನತೆಗೆ ತೋರಿಸಿಕೊಡುವಲ್ಲಿ ಮುಂದಾದರು. ಇಹದಲ್ಲಿಯೇ ದೈವೀರಾಜ್ಯವನ್ನು ಸ್ಥಾಪಿಸುವ ಗುರಿಯಿಂದ ಪ್ರೇರಿತವಾದ ಶರಣಧರ್ಮವು ತನ್ನ ಹಿರಿಮೆಯನ್ನೂ ವೈಶಿಷ್ಟ್ಯವನ್ನೂ ತೋರ್ಪಡಿಸಿತು. ಈ ಅಂಶವನ್ನು ಸ್ಪಷ್ಟಪಡಿಸುವ ದಿಸೆಯಲ್ಲಿ ಈ ಲೇಖಕರ ನಿರೂಪಣೆಯು ಸಾಗಿದೆ. ಈ ಬಗೆಗೆ ಈಗಾಗಲೇ ಬಂದಿರುವ ಆಧುನಿಕ ಕೃತಿಗಳ ಪ್ರಯೋಜನವನ್ನು ಈ ಲೇಖಕರು ಪಡೆದುಕೊಂಡದ್ದು ಇಲ್ಲಿಯ ಬರೆಹದಲ್ಲಿ

ಕಂಡುಬರುತ್ತಿದೆ. ಪರಿಷ್ಕೃತ ವೀರಶೈವವಾಗಿರುವ ಶರಣ ಧರ್ಮದಲ್ಲಿ; ಷಟ್ ಸ್ಥಲವನ್ನು ಸಿದ್ಧಾಂತಗೊಳಿಸುವಲ್ಲಿ ಚೆನ್ನಬಸವಣ್ಣನ ಪಾತ್ರವನ್ನು ವಿವೇಚಿಸುವದು ಈ ಕೃತಿಯ ಉದ್ದೇಶವಾಗಿದೆ. ಅದು ಯಶಸ್ವಿಯೂ ಆಗಿದೆ.

ಮಡಿವಾಳ ಮಾಚಯ್ಯ 'ಭಾವಬಲ್ಲಿದರಾದಂತೆ ಭಾಹುಬಲ್ಲಿದ'ರೂ ಆಗಿದ್ದಾರೆ. ಬಿಜ್ಜಳನು 'ಸಮಯಕ್ಕೆ ತಕ್ಕ ಅನುನಯಕ್ಕಿಳಿಯುವ ಜಾಣ' 'ಶರಣರು ಅನುಭಾವದ ಆಶ್ರಯದಲ್ಲಿ ಅರಿವಿನ ತೃಪ್ತಿಯನ್ನು ಕಾಣಲು ಆತುರಗೊಂಡರು' 'ಶರಣರದು ಕಾಯಂ ಸಾಹಿತ್ಯವಲ್ಲ; ಆತ್ಮಸಾಹಿತ್ಯ' ಎಂಬಂತಹ ಉಕ್ತಿಗಳಲ್ಲಿ ಸೊಬಗಿನೊಂದಿಗೆ ಅರ್ಥಭಾರವೂ ಮೇಳವಿಸಿದೆ. ಆತ್ಮಸಾಹಿತ್ಯ ಎಂಬ ಪದವನ್ನು ಶ್ರೀ ಅರವಿಂದರ ಅಧಿಮಾನಸ ಕಾವ್ಯ (Over Mind Poetry) ಎಂಬದಕ್ಕೆ ಸಮಾನವೆಂದು ಭಾವಿಸಬಹುದು. ಹಲವು ಅರ್ಥಪೂರ್ಣ ಉಕ್ತಿಗಳು ಈ ಕೃತಿಯಲ್ಲಿವೆ. ಆಂಗ್ಲಭಾಷಾ ಶಿಕ್ಷಣದಿಂದ ಕೃತಕವಾಗದ ಸಹಜ ಕನ್ನಡ ಭಾಷಾ ಸರಣಿ ಈ ಲೇಖಕರದಾಗಿದೆ. ಅಧ್ಯಾಯಗಳ ಶೀರ್ಷಿಕೆಗಳು ಆಕರ್ಷಕವಾಗಿವೆ.

ಪುಸ್ತಕದ ಗಾತ್ರ ಚಿಕ್ಕದಾಯಿತು; ನುಸುಳಿ ಬಂದ ಮುದ್ರಣದೋಷ ಹೆಚ್ಚಾಯಿತು; ನಿರೂಪಣೆ ಇನ್ನಷ್ಟು ಏಕಮುಖವೂ ಪರಿಸ್ಫುಟವೂ ಆಗಬಹುದಾಗಿತ್ತು, ಇಂತಹ ಅತೃಪ್ತಿಗೆ ಇಲ್ಲಿ ಎಡೆಯಿರಬಹುದು. ಆದರೆ ಚಿಕ್ಕ ಗಾತ್ರದಲ್ಲಿಯೂ ಮಹತ್ವಪೂರ್ಣ ಅಂಶಗಳಿವೆ. ಘನವಾದ ವಿಷಯ, ಹಸನಾದ ದೃಷ್ಟಿ, ಸೊಗಸಾದ ಭಾಷಾ ಸರಣಿ ಮೇಳವಿಸಿ ಬಂದ ಕೃತಿಯಿದು. ಈ ಕಾಲದಲ್ಲಿ ಜನ ಮನದ ಸಂಸ್ಕಾರಕ್ಕಾಗಿ ಇಂತಹ ಕೃತಿಗಳು ಹೆಚ್ಚಾಗಿ ಬರಬೇಕಾಗಿದೆ.

ತಮ್ಮ ಇಳಿವಯಸ್ಸಿನಲ್ಲಿಯೂ ಈ ಬಗೆಯ ಕೃತಿಯನ್ನು ಜನತೆಗೆ ಒದಗಿಸುತ್ತಿರುವ ಶಿರಹಟ್ಟಿಯವರನ್ನು ಅಭಿನಂದಿಸುತ್ತ ನಾನು ಈ ಕೃತಿಯನ್ನು ಸಂತೋಷದಿಂದ ಸ್ವಾಗತಿಸುತ್ತೇನೆ.

ಪ್ರಶಾಂತ
ಧಾರವಾಡ ೭ — ಸ. ಸ. ಮಾಳವಾಡ.
೧೮–೪–೧೯೭೩

ಓಂ ಶಂ.

ಸುವರ್ಣ ಸಿಂಹಾಸನಾಧೀಶ್ವರ ಡಾ. ಶ್ರೀ ಜ. ಚ. ನಿ. ಸ್ವಾಮಿಗಳವರ

# ಹರಕೆ

## ಮರ್ತ್ಯಕ್ಕಿಳಿದ ಚಿತ್ಕಳೆ.

ಕತ್ತಲೆಯ ಪಾಳಯುವ ರವಿ ಹೊಕ್ಕಂತೆ ಅಂದು ಕಲ್ಯಾಣದ ಶಿವಶ ತಿಂಥಿಣಿಯ ಹೊಕ್ಕ ಚೆನ್ನಬಸವಣ್ಣ. ಕನ್ನಡ ನಾಡನುಡಿಯನ್ನು ಚೆಕ್ಕನೆ ಗಿದ ಚೆನ್ನಬಸವಣ್ಣ. ಚಿಕ್ಕದಣ್ಣಾಯಕನೆಂದು. ಸಮ್ಯಗ್ ಜ್ಞಾನಿಯೆಂದು, ಷ ಸ್ಥಲ ಚಕ್ರವರ್ತಿಯೆಂದು, ಚಿತ್ಕಳಾಮೂರ್ತಿಯೆಂದು ಹೆಸರಾಂತ ಚೆನ್ನಬಸವಣ್ಣ! ಚಿತ್ಕಳೆಯೇ ಸಾಕ್ಷಾತ್ತಾಗಿ ಮೂರ್ತಿವೆತ್ತು ಬಂದ ಚೆನ್ನ ಚೇತ ಚೆನ್ನಬಸವಣ್ಣ! ತನ್ನ ವಿಶಿಷ್ಟ ವಿಚಾರವನ್ನು ಅತ್ಯುತ್ಕೃಷ್ಟ ಸ್ವಯಾನುಭ ವನ್ನು ವಚನಗಳ ಮುಖಾಂತರ ವಿಜೃಂಭಿಸಿದ ಪ್ರತಿಭಾಶಾಲಿ ಚೆನ್ನಬ ವಣ್ಣ! ಹೆಸರಿನಂತೆ ಈತನ ಜಸವೂ ಬಸವಣ್ಣನ ಬಳಿವಿಡಿದು ದುಂಧುವಿ ತ್ತಿದ ನಾಡಿನುದ್ದಕ್ಕೂ! ನುಡಿಯ ಉದ್ದಕ್ಕೂ!! ಅಚ್ಚ ಅರುಹಿನ ಹೊ ಹನ್ನು ಸುಳುಹಿಸಿದ ಯಶಸ್ಸು ಚೆನ್ನಬಸವಣ್ಣನದು. ಕೊನೆಯಲ್ಲಿ ಉಳುವ ಮಹಾಮನೆಯಲ್ಲಿ ಉಳಿದು ಉಳಿಸಿದನು ತನ್ನ ಶೇಷ ಪ್ರಸಾದ ಪರಿಣಾ ವನ್ನು! ಉಳಿಸಿದ್ದು ಕೂಡಲ ಸಂಗವ, ಬೆಳೆದು ಬೆಳಗಿದ್ದು ಕಲ್ಯಾಣ. ಉಳಿ ಉಳಿಸಿದ್ದು ಉಳಿವೆ! ಈತನು ಉಳಿದವರಂತೆ ಪವಾಡ ಪುರುಷನಲ್ಲ. ಆದ ಈತನ ಪ್ರಾತಿಭಪ್ರಜ್ಞಾಪವಾಡ ಉಳಿದವರಿಗಿಂತ ಕಡಿಮೆಯೇನಿಲ್ಲ.

ಅಂದು ಚೆನ್ನಬಸವಣ್ಣನಿತ್ತ, ತನ್ನ ಚಿತ್‌ಶಕ್ತಿಯ ಕಳೆ ಕೊಡುಗೆ ಸಣ್ಣದೇನಲ್ಲ. ಅದರಿಂದ ಸಾಮಾಜಿಕ ಪರಂಪರೆಯ ಪ್ರವಾಹ ವೇಗಕ್ಕೆ ಹೊಸ ತಿರುವು ಬಂದಿತು; ಹೊಸದಿಕ್ಕು ಮೂಡಿತು; ಹೊ ಸ್ವರೂಪ ಸಂಪ್ರಾಪ್ತವಾಯಿತು. ಈ ದಿಸೆಯಲ್ಲಿ ಚೆನ್ನಬಸವಣ್ಣನ ವ್ಯಕ್ತಿತ್ವ ಉಳಿದ ಯಾವ ಮಹಾ ಮಹಾ ವ್ಯಕ್ತಿತ್ವಗಳಿಗೂ ಕಡಿಮೆಯೇನಿಲ್ಲ. ಅಷ್ಟೆ ಅಲ್ಲ ಅದ್ವಿತೀಯ ಸ್ಥಾನಮಾನಗಳನ್ನು ಗಳಿಸಿಕೊಂಡಿದೆ. ವಿಶಿಷ್ಟರೀತಿಯ ವಿರಾಜಮಾನವಾಗಿದೆ.

ಅಂದಿನ ಆ ವೈಚಾರಿಕ ವಿದ್ಯುತ್ ಪರಿವರ್ತನೆಗೆ, ವಿಶಿಷ್ಟ ಪ್ರಗತಿಗೆ ಕಾರ ಕರ್ತನಾದನು ಚಿಕ್ಕದಣ್ಣಾಯಕನಾದ ಚೆನ್ನಬಸವಣ್ಣನು, ಆತನ ವಯಸ್ಸು

ಚಿಕ್ಕವನಾದರೂ ವರ್ಚಸ್ಸು ಚಿಕ್ಕದಲ್ಲ. ಆತನನ್ನು ಅಂದಿನ ಆ ಮಹಾಮಹಾ ಶಿವಶರಣರು ತಂತಮ್ಮ ವಚನಗಳ ಮುಖಾಂತರ ಬಗೆಯಂಬಿ ವರ್ಣಿಸಿದ್ದಾರೆ. ಭಾವಗೀತೆಗಳನ್ನು ರಚಿಸಿದ್ದಾರೆ.

ಚೆನ್ನಬಸವಣ್ಣನದು ಚಿತ್ಕಳೆಯಿಂದ ಚಲುವಾದ ಸಿದ್ಧವಾಣಿ. ಅಪೂರ್ವ ಶಕ್ತಿಸಂಪನ್ನ ಅನುಭೂತಿ ಸಂಪನ್ನ ಸಾಹಿತ್ತಿಕ ವಾಣಿ. ಆ ಚಿತ್ಪ್ರಭೆ ಆ ವಚನ ವಾಣಿಯಲ್ಲಿ ವಿಭಾಗಿಸಿಸಿ ಚೆಲ್ಲುವರಿದಿದೆ. ಆ ಹರವಾದ ಹೊಂಬೆಳಗಿನಲ್ಲಿ ಆತನ ವ್ಯಕ್ತಿ ವೈಶಿಷ್ಟ್ಯ ನವನವೋನ್ಮೇಷ ಶಾಲಿನಿಯಾಗಿ ಪ್ರಕಾಶಿಸುತ್ತಿದೆ.

ಈ ಮಹಾ ಮಹಿಮನ ಬಗೆಗೆ 'ಧರ್ಮದರ್ಶಿ' ಎಂಬ ಹೆಸರಿನಲ್ಲಿ ಇದೀಗ ಹೊತ್ತಿಗೆಯೊಂದನ್ನು ಬರೆದವರು ಶ್ರೀ ಲಕ್ಕಪ್ಪ ಶಿರಹಟ್ಟಿಯವರು. ಇವರು ಈಗಾಗಲೆ ೧೨ ಕೃತಿಗಳನ್ನು ಬರೆದು ಹೊರತಂದು ಕನ್ನಡಿಗರಿಗೆ ಚಿರಪರಿಚಿತರಾಗಿದ್ದಾರೆ. ಈ ಕೃತಿಯನ್ನು ಚೆನ್ನಾಗಿ ರಚಿಸಿದ್ದಾರೆ. ಇವರ ಕೊನೆಯ ಗ್ರಂಥವನ್ನು ವಿಜಾಪುರದ ಪ್ರಮುಖ ವ್ಯಾಪಾರಿಗಳಾದ ಶ್ರೀಮಂತ ಬಿ. ಪಿ. ಹಿರೇಮಠ ಮತ್ತು ಶ್ರೀಮಂತ ಎಸ್. ಜಿ ಹಿರೇಮಠ ಅವರುಗಳು ಉದಾರ ಕೊಡುಗೆಯಿಂದ ಬೆಳಕಿಗೆ ತಂದಿದ್ದಾರೆ. ಈ ಮೊದಲು ನಾವು ಬರೆದ 'ಶತಕ ತ್ರಯ ಪ್ರವಚನ' ಎಂಬ ಬೃಹತ್‌ಕೃತಿಯ ಸೇವೆಯನ್ನು ಸಲ್ಲಿಸಿ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಇದರಂತೆ ಇದೀಗ ಈ ಕೃತಿಯ ಪ್ರಕಾಶನದೊಡನೆ ಮತ್ತೊಮ್ಮೆ ಸಾಹಿತ್ಯ ಸೇವೆಯನ್ನು ಸಲ್ಲಿಸಿದ ಸೈಪಿಗೆ ಕಾರಣರಾಗಿದ್ದಾರೆ. ತಮ್ಮ ಕಾಯಕವನ್ನು ಸಾರ್ಥಕಪಡಿಸಿಕೊಂಡಿದ್ದಾರೆ. ಇನ್ನೂ ಹೆಚ್ಚಾಗಿ ಇವರಿಂದ ಇಂತಹ ಶಾಶ್ವತ ಸಾರ್ಥಕಸೇವೆ ಸಲ್ಲುವಂತಾಗಲಿ. ಇವರ ಬಾಳು ಹಸನಾಗಲಿ ಬದುಕು ಬೆಳೆಯಲಿ.

ಈ ಹೊತ್ತಿಗೆಯ ಲಕ್ಕಪ್ಪ ಅ. ಶಿರಹಟ್ಟಿ ಅವರು ತಮ್ಮ ಈ ಅಪರವಯಸ್ಸಿನಲ್ಲಿಯೂ ಸಹ ಇಂತಹ ನುಡಿಯೊಳಿಗವನ್ನು ನೆರವೇರಿಸಿ ಆದರ್ಶರಾಗಿದ್ದಾರೆ. ಅವರು ಹದುಳತೆಯಿಂದ ಇನ್ನು ಹೆಚ್ಚುಕಾಲ ಬಾಳಿ ಬೆಳಗಲೆಂದು ಹೃದಯಾರೆ ಹರಸಲಾಗಿದೆ.

೨–೨–೭೫ ಇತಿ ನಲ್

ವಿಜಾಪುರ

# ಭಾಗ್ಯದ ಬಾಗಿಲ ತೆಗೆದಾಗ

## (ಶ್ರೀ ಬಿ. ಪಿ. ಹಿರೇಮಠ ಅವರ ಪರಿಚಯ)

ಶ್ರೀ ಬಸವಣ್ಣೆಯ್ಯ ಪಟ್ಟದಯ್ಯ ಹಿರೇಮಠ ಇವರು ಅಂತೂರ ಬೆಂತೂರಲ್ಲಿ ಹುಟ್ಟಿ, ಬಾದಾಮಿಯಲ್ಲಿ ಬೆಳಕ ಕಂಡು, ವಿಜಾಪುರದಲ್ಲಿ ಕೀರ್ತಿಪಡೆದಿದ್ದಾರೆ. ಉತ್ತರಕ್ಕೆ ಬಂದು ಉತ್ತರೋತ್ತರ ಅಭಿವೃದ್ಧಿ ಹೊಂದಿದ್ದಾರೆ. ವಿಜಾಪುರದಲ್ಲಿಯ ಬಿ. ಪಿ. ಹಿರೇಮಠ ಈ ಹೆಸರಿನ ಕಾಗದ ಮತ್ತು ಸ್ಟೇಶನರಿ ಅಂಗಡಿಯು ಜಿಲ್ಲೆಯಲ್ಲಿಯೇ ಪ್ರಮುಖವಾಗಿದೆ. ವ್ಯಾಪಕವಾಗಿ ವ್ಯವಹಾರ ನಡೆಸುತ್ತಿದೆ. ಇವರು ನಡೆದು ಬಂದ ದಾರಿಯನ್ನು ನೋಡಬೇಕು:

ಅಂತೂರು ಬೆಂತೂರು ಅವಳಿಗ್ರಾಮ. ಅಂತೂರ ಹಿರೇಮಠದವರಿವರು. ಹುಟ್ಟು ೧೯೦೦ ರಲ್ಲಿ. ಗದುಗಿನಲ್ಲಿ ಕಲಿತು ಮುಲ್ಕಿ ಹಾಗು ಕುಲಕರ್ಣಿ ಪರೀಕ್ಷೆ 'ಪಾಸು' ಆದರು. ಎರಡು ವರ್ಷ ಬಾದಾಮಿ ತಾಲೂಕಿನ ಮುತ್ತಲಗೇರಿ, ಯರಗೊಪ್ಪ, ಬಾದಾಮಿ ಗ್ರಾಮಗಳ ಕುಲಕರ್ಣಿಯಾಗಿದ್ದರು. ಬಳಿಕ ಬಾದಾಮಿ ತಾಲೂಕಿನಲ್ಲಿಯೇ ಸ್ವರಾಜ್ಯ ಜೀವವಿಮಾ ಕಂಪನಿಯ ಸಂಘಟಕರಾಗಿ ಕೆಲಸಮಾಡಿದರು. ಅದರೊಡನೆ ಬಹುಮುಖ ಸಮಾಜ ಸೇವೆಯನ್ನು ಕೈಕೊಂಡರು. ತಾಲೂಕಿನಲ್ಲಿ ಪ್ರಭಾವಯುತ ಸಾರ್ವಜನಿಕ ಕಾರ್ಯಕರ್ತರೆಂದು ಹೆಸರುಗಳಿಸಿದರು.

ಶ್ರೀ ಬಿ. ಪಿ. ಅವರ ಮಕ್ಕಳಲ್ಲಿ ಚಿರಾಯುಷ್ಯವಂತೆ ಒಬ್ಬ ಮಗಳು ಮಾತ್ರ! ಹೆಸರು ಶಕುಂತಲಾತಾಯಿ. ಈ ತಾಯಿಯಿಂದಲೇ ಇವರ ಮನೆತನದ ಬಳ್ಳಿ ಕುಡಿಯೊಡೆದು ಪರವಾಗಿ ಹಬ್ಬಿದೆ. ವಿಜಾಪುರದಲ್ಲಿಯ ಅಡತಿಅಂಗಡಿ ಒಡೆಯರಾದ ಶ್ರೀ ಗುರುಬಸಯ್ಯ ಹಿರೇಮಠ ಇವರ ಪುತ್ರ ಶ್ರೀ ಷಡಕ್ಷರಯ್ಯನವರೊಡನೆ ಶಕುಂತಲಾ ತಾಯಿಯ ಮದುವೆಯಾಯಿತು (೧೯೪೭). ಶ್ರೀ ಬಿ. ಪಿ. ಅವರ ಧರ್ಮಪತ್ನಿ ಶ್ರೀಮತಿ ಗುರುಸಿದ್ಧಮ್ಮನವರು ಮಗಳನ್ನಗಲಿ ಇರಲಾರದವರಾದುದರಿಂದ ಯಜಮಾನರು ವಿಜಾಪುರಕ್ಕೆ ಬಂದು ನೆಲಿಸಬೇಕಾಯಿತು; ಇಲ್ಲಿ ಬೇರೆ ಮನೆಮಾಡಿಕೊಂಡಿದ್ದರು. ಆದರೆ ೧೯೫೮ ರಲ್ಲಿ ಶ್ರೀಮತಿ ಗುರುಸಿದ್ಧಮ್ಮನವರು ಶಿವೈಕ್ಯರಾದುದರಿಂದ ಮುಂದೆ ಅಳಿಯಂದಿರೊಡನೆ ಒಂದೇ ಮನೆಯಲ್ಲಿದ್ದಾರೆ, ಅವರು ಎಲ್ಲಿದ್ದರೂ ಅವರ ಉದ್ಯೋಗ ಭಾಗ್ಯ ಅವರೊಡನೆಯೇ ಇದೆ.

ವಿಜಾಪುರದಲ್ಲಿ ನೆಲಿಸಿದ ಬಳಿಕ ಶ್ರೀ ಬಿ. ಪಿ. ಅವರಿಗೆ ವ್ಯಾಪಾರದಲ್ಲಿ ಒಲವುಂಟಾಯಿತು. ಅಷ್ಟರಲ್ಲಿ ಇಲ್ಲಿ ವಿಜಯಕಾಲೇಜ ಸ್ಥಾಪಿಸಲ್ಪಟ್ಟಿತು



ಶ್ರೀ ಬಿ. ಪಿ. ಹಿರೇಮಠ
ಕಾಗದ ವ್ಯಾಪಾರಿಗಳು, ವಿಜಾಪುರ.

ಆಗತ್ಯಗಳ ಅಭ್ಯಾಸ ಮತ್ತು ಸಮಾಲೋಚನೆಯ ನಂತರ ೧೯೪೫ ರಲ್ಲಿ ಪಾಲುಗಾರಿಕೆಯಿಂದ ಸ್ಟೇಶನರಿ ಅಂಗಡಿಯನ್ನು ಆರಂಭಿಸಿದರು, ೧-೪-೧೯೫೪ ರಲ್ಲಿ ಪಾಲುಗಾರರನ್ನು ಬಿಟ್ಟು, ಈಗದ ಮುಖ್ಯವಾದ ಸ್ಟೇಶನರಿ ಅಂಗಡಿಯನ್ನು ಸ್ವತಂತ್ರವಾಗಿಟ್ಟರು. ಅದು ತ್ರಿಪುರಸುಂದರಿ ಥಿಯೇಟರದ ಮಗ್ಗಲಗಿದ್ದಿತು. ಬೇಗನೆ ಅದರ ಎದುರಗಡೆ ಒಂದು ಸ್ಥಳಕೊಂಡು ಸುಂದರವಾದ ಕಟ್ಟಡ ಕಟ್ಟಿಸಿ ಅಂಗಡಿಯನ್ನು ಅಲ್ಲಿಗೆ ಒಯ್ದರು. (೧೯೫೭) ಕಳೆದ ವರ್ಷ ಅಂಗಡಿಯ ಹೆಸರು ಬದಲಿಸದೆ, ತಾವು ಹಳೆಯ ಮೊಮ್ಮಗ (ಉಮೇಶ) ಮೂವರ ಸಂಯುಕ್ತ 'ಫರ್ಮ' ಮಾಡಿದ್ದಾರೆ. ವ್ಯಾಪಾರ ವರ್ಧಿಸುತ್ತಲೇ ಇದೆ. ೧೯೬೯ರಲ್ಲಿ ಇಂಧನ ಗ್ಯಾಸಿನ ಅಂಗಡಿಯನ್ನು ಆರಂಭಿಸಿದ್ದಾರೆ.

ಯೋಜನಾಬದ್ಧ ವ್ಯಾಪಾರ ಇವರದು. ಮುಂದಿನ ವರ್ಷದ ಜಿಲ್ಲೆಯ ಶಾಲೆ ಕಾಲೇಜುಗಳ ಸಂಖ್ಯೆಯಿಂದ ಪೂರೈಸಬೇಕಾಗಿದ್ದ ಸರಕುಗಳ ಅಂದಾಜು ಮಾಡುವರು, ಉತ್ಪಾದಕ ಸಂಸ್ಥೆಗಳಿಗೆ ಮುಂಚಿತವಾಗಿ ಬೇಡಿಕೆ ಸಲ್ಲಿಸುವರು, ಇದರಿಂದ ಅವಸರದಲ್ಲಿ ಆಗಬಹುದಾದ ಹಾನಿ ತಪ್ಪಿ, ಅಲ್ಪಾಂಶ ಲಾಭದಿಂದ ಮಾರಲು ಇವರಿಗೆ ಸಾಧ್ಯವಾಗಿ ವ್ಯಾಪಾರ ಬಹಳ ಬೆಳೆದಿದೆ. ಹಿರಿಯ ವಯದಲ್ಲಿಯೂ ನಗೆಮೊಗದ ಮುಗ್ಧಭಾವದ ಶ್ರೀ ಬಿ. ಪಿ. ಅವರ ಮಾತು ಆಕರ್ಷಕವಾಗಿವೆ. ಇವರು ನೌಕರರನ್ನು ಒಲಿಸಿ ಕೆಲಸ ಮಾಡಿಸಿಕೊಳ್ಳಬಲ್ಲರು. ಇವರ ಸರಳತೆ ಸ್ಪಷ್ಟತೆಗಳು ಗ್ರಾಹಕರ ವಿಮರ್ಶನಗೆ ಆಸ್ಪದ ಕೊಡುವದಿಲ್ಲ.

ಶ್ರೀ ಬಿ. ಪಿ. ಅವರದು ಸಾಮಾಜಿಕ ಜೀವನ! ಕೆಲವು ವಿದ್ಯಾಸಂಸ್ಥೆಗಳ ಆಜೀವಸದಸ್ಯರಾಗಿ ನೆರವು ನೀಡಿದ್ದಾರೆ. ಬಡವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತಿದ್ದಾರೆ. ಸಾಂಸ್ಕೃತಿಕ ಸಭೆ ಸಮ್ಮೇಲನ. ಸಮಾರಂಭಗಳಿಗೆ ವಂತಿಗೆ ಕೊಡುತ್ತಾರೆ ಇಂತಹ ವಿಶಿಷ್ಟ ದಾನಮಾಡುವಾಗ ಅದರ ಸದುಪಯೋಗವಾಗುವ ಭರವಸೆ ಪಡೆಯುತ್ತಾರೆ, ಸತ್ಪಾತ್ರಕ್ಕೆ ಇವರ ಕೊಡುಗೈ ಮುಂದೆ ಬರುತ್ತದೆ. ಸಾಹಿತ್ಯಕ್ಕೂ ಇವರ ಸಹಾಯ ಸಂದಿದೆ. ಪೂಜ್ಯ ಡಾ. ಶ್ರೀ ಜ ಚ ನಿ ಅವರ ಬೃಹದ್‌ಗ್ರಂಥ 'ಶತಕತ್ರಯ ಪ್ರವಚನ'ದ ಅಚ್ಚಿನ ವೆಚ್ಚವನ್ನು ನಿರ್ವಹಿಸಿದರು. ಈ 'ಧರ್ಮದರ್ಶಿ' ಪುಸ್ತಕವು ಇವರ ಕೊಡುಗೆಯಿಂದಲೇ ಈಗ ಬೆಳಕ ಕಾಣುತ್ತಲಿದೆ.

**ಶ್ರೀ ಎಸ್. ಜಿ. ಹಿರೇಮಠ ಬಿ. ಏಸ್‌ಸಿ.**

ಶ್ರೀ ಬಿ. ಪಿ. ಅವರಂತೆ ಆಳಿಯಂದಿರಾದ ಶ್ರೀ ಷಡಕ್ಷರಯ್ಯ ಗುರುಬಸಯ್ಯ (ಎಸ್. ಜಿ.) ಹಿರೇಮಠ ಇವರೂ ಭಾಗ್ಯಶಾಲಿಗಳು! ಇವರ ಮೂಲಸ್ಥಳ ಮುಳಸಾವಳಗಿ, ಇವರ ಹಿರಿಯರು ಡೋಣಿಬೂದಿಹಾಳದಲ್ಲಿ ಭೂಮಿ

ಸಂಪಾದಿಸಿದ್ದಾರೆ. ಅದೂ ಇವರ ಊರಾಗಿದೆ. ಇವರ ಅಣ್ಣಂದಿರಾದ ಶ್ರೀ ಸಂಗಯ್ಯನವರು ಮುಳಸಾವಳಗಿಯ ಆಸ್ತಿಯ ಒಡೆಯರಾಗಿ ಉಪಭೋಗಿಸು ತ್ತಿದ್ದಾರೆ. ಶ್ರೀ ಎಸ್. ಜಿ. ಅವರು ಕೊಲ್ಲಾಪುರ ಕಾಲೇಜದಿಂದ ಬಿ. ಎಸ್‌ಸಿ ಪದವೀಧರರಾಗಿ ಸ್ವಲ್ಪಕಾಲ ಶಿಕ್ಷಕರಾಗಿದ್ದರು. ೧೯೪೦ರಲ್ಲಿ ಕಂದಾಯಖಾತೆ ಸೇರಿ ತಹಶೀಲದಾರರಾದರು. ಕರ್ತವ್ಯದಕ್ಷತೆಯಿಂದ ಸರಕಾರಕ್ಕೂ ಜನತೆ ಗೂ ಪ್ರಿಯರಾಗಿದ್ದರು. ವಿಜಾಪುರ ತಾಲೂಕಿನ ತಹಶೀಲದಾರರಾಗಿದ್ದಾಗ ೧೯೭೦ ರಲ್ಲಿ ನಿವೃತ್ತರಾಗಿದ್ದಾರೆ. ಕೂಡಲೆ ಗ್ಯಾಸಿನ ಅಂಗಡಿ ಮಾಲಿಕತ್ವ ವಹಿಸಿಕೊಂಡು ಕಾಗದದ ಅಂಗಡಿಯಲ್ಲಿಯೂ ಮಾವಂದಿರೊಡನೆ ಮೇಲಿನ ಕೆಲಸ ನೋಡಿಕೊಳ್ಳುತ್ತಿದ್ದಾರೆ. ಶ್ರೀ ಎಸ್. ಜಿ. ಅವರಿಗೆ ಕೃಷಿಯಲ್ಲಿಯೂ ಆಸಕ್ತಿ! ತಮ್ಮ ಭೂಮಿಯಲ್ಲಿ ಅದನ್ನು ಆಧುನಿಕ ರೀತಿಯಲ್ಲಿ ಅಭಿವೃದ್ಧಿ ಗೊಳಿಸುತ್ತಿದ್ದಾರೆ.

ಶ್ರೀ. ಎಸ್ ಜಿ. ಅವರಿಗೆ ಐವರು ಹೆಣ್ಣು ಮಕ್ಕಳು, ನಾಲ್ವರು ಗಂಡು ಮಕ್ಕಳು ಇದ್ದಾರೆ, ನಾಲ್ವರು ಹೆಣ್ಣುಮಕ್ಕಳ ಮದುವೆಯಾಗಿದೆ. ಎಲ್ಲ ಅಳಿಯಂದಿರು ಉಚ್ಚಶಿಕ್ಷಣ ಪಡೆದವರು. ವಿವಿಧ ಹುದ್ದೆಗಳಲ್ಲಿ ಕಾರ್ಯ ನಿರ ತರಾಗಿದ್ದಾರೆ. ಗಂಡುಮಕ್ಕಳು ಪ್ರಾಥಮಿಕದಿಂದ ಕಾಲೇಜವರೆಗಿನ ಬೇರೆ ಬೇರೆ ತರಗತಿಗಳಲ್ಲಿ ಕಲಿಯುತ್ತಿದ್ದಾರೆ. ಮೂರನೆಯ ಚಿರಂಜೀವ ಪ್ರಕಾಶ, ಅಜ್ಜ ಶ್ರೀ ಬಿ. ಪಿ ಅವರಿಗೆ ದತ್ತಪುತ್ರರಾಗಿದ್ದಾರೆ.

ಶ್ರೀ ಎಸ್. ಜಿ. ಅವರು ವಿನಯ ಶೀಲರು, ಧರ್ಮಾಸಕ್ತರು, ಸೌಜ ನ್ಯವೇ ಮೈವೆತ್ತುಬಂದಂತಿದ್ದಾರೆ. ತಮ್ಮ ಗುರುಗಳಾದ ಶ್ರೀಶೈಲ ಸೂರ್ಯ ಸಿಂಹಾಸನಾಧೀಶ ಡಾ. ಜ ಚ ನಿ ಅವರಲ್ಲಿ ನಿಸ್ಸೀಮ ಭಕ್ತಿಯುಳ್ಳವರಾಗಿದ್ದಾರೆ ತಮ್ಮ ಮಾವನವರ ಧರ್ಮಾರ್ಥ ಕಾರ್ಯಗಳಿಗೆ ಪುರಸ್ಕಾರ ನೀಡುತ್ತಿದ್ದಾರೆ.

ಶ್ರೀ ಎಸ್. ಜಿ. ಅವರ ಲಿಂ. ತಂದೆಯವರು ವಿಜಾಪುರದಲ್ಲಿ ಸ್ವಂತ ಮನೆಮಾಡಿದ್ದರು. ಅದನ್ನೇ ಇವರು ಆಧುನಿಕ ಕ್ರಮದಲ್ಲಿ ಪುನಃ ಕಟ್ಟಿಸಿ ಸಜ್ಜುಗೊಳಿಸಿದ್ದಾರೆ. ಮಾವಂದಿರೊಡನೆ ಅಲ್ಲಿ ವಾಸಿಸಿದ್ದಾರೆ. ಉಭಯತರು ಹಿಂದಿನ ಇಂದಿನ ಸಂಸ್ಕೃತಿಗಳ ಸಮನ್ವಯದ ರೀತಿಯಲ್ಲಿ ಸುಖಶಾಂತಿಯಲ್ಲಿ ಬಾಳುತ್ತಿದ್ದಾರೆ. ಇವರಿಗೂ ಇವರ ಸಂತಾನಕ್ಕೂ ದೇವರು ಸದಾ ಶುಭ ವನ್ನೀಯಲಿ ಎಂದು ಹಾರೈಸೋಣ.

ವಿಜಾಪೂರ
ಯುಗಾದಿ ೧೨-೪-೭೫

ಲ. ಅ. ಶಿ.

# ಲೇಖಕನ ಅರಿಕೆ.

"ನಮ್ಮ ಪುರಾಣಕಾವ್ಯಗಳನ್ನು ರಚಿಸಿದ ಕವಿಗಳು ಶರಣರ ಜೀವನವನ್ನು ಅದ್ಭುತವಾಗಿ ಅಲೌಕಿಕವಾಗಿ ಚಿತ್ರಿಸುವ ಹವ್ಯಾಸದಲ್ಲಿ ಶರಣರ ಅಮೌಲ್ಯ ಆದರ್ಶಗಳನ್ನು ಸಾಮಾನ್ಯಜನರಿಂದ ದೂರವಿರಿಸಿದ್ದಾರೆ. ಪವಾಡ ಕಥನಗಳಿಂದ ಮುಗ್ಧಜನತೆಯನ್ನು ಕೌತುಕಗೊಳಿಸುವಲ್ಲಿಯೇ ಬಹುಶಃ ಕೃತಾರ್ಥರಾಗಿದ್ದಾರೆ." ಇದು ಮೊದಲಿನಿಂದ ನನ್ನ ಮನಸ್ಸಿನಲ್ಲಿ ಮೂಡಿದ ಕಲ್ಪನೆ. ಈ ಗ್ರಹಿಕೆ ತಪ್ಪಾಗಿಯೂ ಇರಬಹುದು. ಆದರೆ ಶರಣರು ಮಾತ್ರ ಅದ್ಭುತಕಾರ್ಯಗಳಿಂದ ಪವಾಡಗಳಿಂದ ದೊಡ್ಡವರಾಗಲಿಲ್ಲ, ಅವರು ಸಾಮಾನ್ಯರಂತೆ ಸಂಸಾರಿಕರಲ್ಲಿಯೇ ಹುಟ್ಟಿ ಸಂಸಾರವನ್ನೇ ಮಾಡಿದರು, ಆದರೆ ಅಂತರಂಗದಲ್ಲಿ ಅದರಿಂದ ಅಲಿಪ್ತರಾಗಿದ್ದರು; ನಡೆನುಡಿಗಳೊಂದಾದ ಸತ್ಯಸದಾಚಾರಿಗಳಾಗಿದ್ದರು. ಶ್ರಮ ಜೀವನದಿಂದ ಸ್ವಾವಲಂಬಿಗಳಾಗಿದ್ದರು. ನಾನೆಂಬುದಿಲ್ಲದ ನಿರಹಂಕಾರಿಗಳಾದರು, ತ್ಯಾಗ ಸೇವೆಗಳಿಂದ ದಾಸೋಹಿಗಳೆನಿಸಿದರು. ಭಿನ್ನ-ಭೇದವಳಿದು ಆತ್ಮೈಕ ಭಾವದವರಾದರು. ಸಕಲ ಜೀವಿಗಳ ಲೇಸನೇ ಬಯಸಿ ಸ್ವಾರ್ಥರಹಿತರಾದರು. ಕ್ರೋಧವನ್ನಳಿದು ಮಾನಸಿಕ ಸಮತೆಯನ್ನು ಸಾಧಿಸಿದರು. ನನ್ನದೆಂಬುದನ್ನು ಮರೆದು ನಿರ್ಮೋಹಿಯಾದರು, ಸರ್ವಸ್ವವನ್ನು ಶಿವನಿಗರ್ಪಿಸಿ ಪ್ರಸಾದಿಯಾದರು ಸರ್ವವೂ ಶಿವಸ್ವರೂಪವೆಂದು ಭಾವಿಸಿ ಪರಮಾನಂದ ಭರಿತರಾದರು. ಹೀಗೆ ಅಂಗಗುಣವಳಿದು ಲಿಂಗಗುಣವಂತರಾಗಿ ಲಿಂಗಾಂಗಸಾಮರಸ್ಯ ಸುಖಿಗಳಾದರು. ಇದು ಅವರ ಜೀವನದ ಹಿರಿಮೆಯ ರಹಸ್ಯವಾಗಿದೆ.

'ಮನೋರಂಜನೆಯೊಂದಿಗೆ' ಶರಣರ ಈ ಅಮರ ಆದರ್ಶಗಳು ಸಾಮಾನ್ಯ ಓದುಗರ ಮನಕ್ಕೆ ಮುಟ್ಟುವಂತೆ; ಅವರ ಜೀವನ ಚರಿತ್ರೆ ಬರೆಯಬೇಕು ಎಂದು ನನ್ನ -ಅಲ್ಪತೆಯನ್ನೂ ಅರಿಯದೆ-ಮನಸ್ಸು ಮಾಡಿದೆನು ಗುರು-ಜಂಗಮ ಶಿವಯೋಗಿಗಳ ಆಶೀರ್ವಾದದ ಬಲದಲ್ಲಿ ನಂಬಿಗೆಯಿರಿಸಿ ಯತ್ನಿಸಿದೆನು, ಆ ಕಾರ್ಯನಿರತನಾಗಿರುವಾಗ ಆನಂದವನ್ನು ಅನುಭವಿಸಿದೆನು. ಈ

ರೀತಿಯಲ್ಲಿ 'ಬಸವರಾಜ ದೇವರು (ಬಸವಣ್ಣನವರ ಚರಿತ್ರೆ)' 'ಕ್ರಾಂತಿಗಂಗೋತ್ರಿ (ಅಕ್ಕನಾಗಮ್ಮನವರ ಚರಿತ್ರೆ)' 'ಕಾಯಕ ವೀರ (ಮೋಳಿಗೆಯ ಮಾರಯ್ಯನ ಚರಿತ್ರೆ)' ಇವುಗಳನ್ನು ಬರೆದೆನು. ಇವುಗಳಿಗೆ ಸಹೃದಯರಿಂದ ಪ್ರೋತ್ಸಾಹ ದೊರೆತದ್ದರಿಂದ ಉತ್ತೇಜಿತನಾಗಿ ಮುಂದುವರಿದಿದ್ದೇನೆ.

ಕಲ್ಯಾಣದ ಶರಣರ ಕ್ರಾಂತಿಗೆ ಮಹಮನೆ ಕೇಂದ್ರವಾಗಿತ್ತು. ಬಸವೇಶ ನಾಗಲಾಂಬೆ, ಚೆನ್ನಬಸವೇಶ ಇವರು ಆ ಕೇಂದ್ರದ ಮೂಲಶಕ್ತಿಗಳಾಗಿದ್ದರು. (ನೀಲಾಂಬೆ, ಗಂಗಾಂಬೆಯರು ಸಹಾಯಕ ಶಕ್ತಿಯಾಗಿದ್ದರು), ಇವರಲ್ಲಿ ಇಬ್ಬರ ಚರಿತ್ರೆಗಳಾಗಿ ಮೂರನೆಯ ಚೆನ್ನಬಸವಣ್ಣನವರ ಚಾರಿತ್ರಿಕರೂಪಕ ರಚಿಸುವ ವರೆಗೆ ನನಗೆ ತೃಪ್ತಿ ಇರಲಿಲ್ಲ ಶಿವಕೃಪೆಯಿಂದ ಅದನ್ನೀಗ ಪೂರೈಸಿದ್ದೇನೆ ಉದ್ದೇಶ ಮೇಲೆ ಹೇಳಿದುದೇ! ಅದು ಈಡೇರಿದೆಯೇ ಎಂಬದನ್ನು ಓದುಗರೇ ನಿರ್ಣಯಿಸಬೇಕು!

ಕೆಲವು ಸನ್ನಿವೇಶಗಳು ಈ ಮೂವರು ಮಹಾನುಭಾವರ ಜೀವನಕ್ಕೂ ಸಂಬಂಧಿಸಿರುತ್ತವೆ. ಆಯಾ ಚರಿತ್ರ ನಾಯಕರಿಗೆ ವಿಶೇಷವಾಗಿ ಸಂಬಂಧಿಸಿದ ಸನ್ನಿವೇಶಗಳನ್ನು ವಿವರವಾಗಿ, ಹಾಗಿಲ್ಲದವುಗಳನ್ನು ಸಂಕ್ಷೇಪವಾಗಿ ನಿರೂಪಿಸುವ ಕ್ರಮ ಅನುಸರಿಸಿದ್ದೇನೆ.

'ಬಸವರಾಜದೇವರು' 'ಕ್ರಾಂತಿಗಂಗೋತ್ರಿ' ಕೃತಿಗಳಿಗೆ ಸಹಾಯಕವಾದ ಗ್ರಂಥಗಳೇ ಆ ಕೃತಿಗಳ ಮುಖಾಂತರ ಈ ಕೃತಿಗೂ ಸಹಾಯಕವಾಗಿವೆ. ಡಾ. ಆರ್. ಸಿ. ಹಿರೇಮಠ ಎಮ್‌ಎ, ಪಿಎಚ್‌ಡಿ, ಅವರ ಷಟ್‌ಸ್ಥಲಪ್ರಭೆ ವಿಶೇಷವಾಗಿ ನೆರವಾಗಿದೆ. ಈ ಎಲ್ಲ ಗ್ರಂಥಕಾರರಿಗೆ ನಾನು ಋಣಿ!

ಹಸ್ತಪ್ರತಿಯನ್ನು ಓದಿಸಿ ಕೇಳಿ ಆಶೀರ್ವದಿಸಿದ ಸದ್ಗುರು ಶ್ರೀ ಶಾಂತ ವೀರ ಮಹಾಸ್ವಾಮಿಗಳಿಗೂ, ಮಹಾ ಶಿವಯೋಗಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಿಗೂ ಅನಂತ ವಂದನೆಗಳು. ಅಚ್ಚು ಮುಗಿಯುವ ಹಂತದಲ್ಲಿದ್ದಾಗ ಹೊತ್ತಿಗೆಯನ್ನು ಅವಲೋಕಿಸಿ 'ಹರಕೆ'ಯ ಲೇಖವನ್ನು ಕರುಣಿಸಿದ ಪೂಜ್ಯ ಡಾ. ಜ, ಚ. ನಿ. ಮಹಾಸನ್ನಿಧಿಗೆ ತ್ರಿ. ಕೃ ಪ್ರಣಾಮಗಳು.

ವಿಜಾಪುರದ ಶ್ರೀಮಂತ ವರ್ತಕರಾದ ಶ್ರೀ ಬಿ. ಪಿ. ಹಿರೇಮಠ ಹಾಗು ಅವರ ಅಳಿಯಂದಿರಾದ ಶ್ರೀ ಎಸ್. ಜಿ. ಹಿರೇಮಠ ಇವರೊಡನೆ ನನ್ನ

ಬರೆಹಗಳ ಬಗೆಗೆ ಸಹಜ ಸಲ್ಲಾಪ ನಡೆದಿರುವಾಗ ಉಭಯ ಮಹನೀಯರು ಈ ಹೊತ್ತಿಗೆಗೆ ಧನಸಹಾಯ ನೀಡುವ ತಮ್ಮ ಅಭಿಮತವನ್ನು ಸ್ವಪ್ರೇರಣೆಯಿಂದ ವ್ಯಕ್ತಪಡಿಸಿದರು. ಅವರ ಔದಾರ್ಯದ ವಾಗ್ದಾನವನ್ನು ನಾನು ಆನಂದದಿಂದ ಸ್ವೀಕರಿಸಿದೆನು. ಅದರಂತೆ ಈ ಹೊತ್ತಿಗೆಯ ಅಚ್ಚಿನ ವೆಚ್ಚವನ್ನು ಪೂರ್ಣವಾಗಿ ವಹಿಸಿ ಕೃತಿ ಬೆಳಕಿಗೆ ಬರಲು ಕಾರಣರಾಗಿದ್ದಾರೆ. ಇವರ ಉಪಕಾರವನ್ನು ಸ್ಮರಿಸದಿರಲಾರೆನು.

ಸತ್ವಯುತವಾದ ಸುಂದರವಾದ ಮುನ್ನುಡಿಯನ್ನು ಈ ಹೊತ್ತಿಗೆಯ ಮುಡಿಗಿರಿಸಿ ಅಲಂಕರಿಸಿ ಕನ್ನಡಿಗರ ಉಡಿಗೆ ನೀಡುತ್ತಿರುವ ಪ್ರೊ॥ ಶ್ರೀ ಸ. ಸ. ಮಾಳವಾಡ M. A. ಅವರಿಗೆ ಚಿರಋಣಿಯಾಗಿರುವೆ.

ಅಚ್ಚು ನಡೆದಾಗ ನನಗೆ ಕಾಯಿಲೆಯಾದುದರಿಂದ ಅಚ್ಚಿನ ಕರಡು ತಿದ್ದುವದಕ್ಕೆ ನೆರವಾದ ಮಹನೀಯರಿಗೂ ಶ್ರೀ ಸದ್ಗುರು ಶಿವಾನಂದ ಮುದ್ರಣಾಲಯದ ಒಡೆಯರಿಗೂ ಕೃತಜ್ಞನಾಗಿರುವೆ.

ತೊರವಿ
ಅಕ್ಷಯ ತೃತಿಯ
೧೩-೫-೭೫

ವಿಬುಧ ವಿಧೇಯ
ಲಕ್ಕಪ್ಪ ಶಿರಹಟ್ಟಿ

# ಪರಿವಿಡಿ



---

ಪುಸ್ತಕದ ಕೊನೆಯಲ್ಲಿರುವ ಒಪ್ಪೋಲೆಯಂತೆ ದಯವಿಟ್ಟು ಮೊದಲು ತಿದ್ದಿಕೊಂಡು ಓದಬೇಕು,

ಓಂ

# ೧. ಉದಯು ಭಾನು.

"ಬಸವೇಶ, ಬಸವಣ್ಣ, ಎಷ್ಟು ಸೊಗಸಾಗಿದೆ ಈ ಹೆಸರು! ಹೇಳಿದರೆ ಚಂದ, ಕೇಳಿದರೆ ಆನಂದ! ಬಸವೇಶಾ, ನಿನ್ನ ಗುಣಗಳ ಆಶ್ರಯದಿಂದ ಈ ನಿನ್ನ ಹೆಸರು ಇನ್ನಿಷ್ಟು ಚೆನ್ನಾಗಿದೆ. ಬಸವಾ ಎಂದರೆ ಆಶ್ರಮಿಗಳ ಮನ ಅರಳುವದು, ನೀ ಬಂದರೆ ನಿನ್ನ ಸುತ್ತಲು ಕುಣಿದಾಡುವರು ನಿನ್ನ ಸಹಪಾಠಿಗಳು. ಹೆಸರು 'ಬಸವ' ಎಂಬುವದಕ್ಕಿಂತ ಇನ್ನಾವುದು ಚೆನ್ನು? ನಿನ್ನ ಅಳಿಯನಿಗೂ ನಿನ್ನ ಹೆಸರನ್ನೇ ಇಡೋಣವೇ ಬಸವೇಶಾ?"

ಜಾತವೇದಮುನಿಗಳು ವಿಕಸಿತ ನೇತ್ರಗಳಿಂದ ಮುಂದೆ ನಿಂತ ಬಸವಣ್ಣ ನನ್ನು ನೋಡುತ್ತ ನುಡಿದರು. ಅವರು ಮೃದುವಾದ ಬಟ್ಟೆಯಲ್ಲಿಯ ಹನ್ನೆರಡು ದಿನದ ಹಸುಳೆಯುನ್ನು ತೊಡೆಯು ಮೇಲಿರಿಸಿಕೊಂಡು ಕಾಲುಮಣೆಯು ಆಸನದಲ್ಲಿ ಕುಳಿತಿದ್ದರು. ಗುರುಗಳ ಮಾತಿಗೆ ಏನು ಹೇಳುವನಾಗ ಬಸವಣ್ಣ? ಅವರ ಮಂದಸ್ಮಿತ ಮುಖವನ್ನು ಮಾತ್ರ ನೋಡಿ ಮತ್ತೆ ತಲೆವಾಗಿ ನಿಂತನು. ಜಾತವೇದ ಮುನಿಗಳೇ ಮತ್ತೆ ನಗುತ್ತ ನುಡಿದರು.

"ನೋಡಿದೆಯಾ, ನಿನ್ನಳಿಯ ಕಣ್ಣು ಹೊರಳಿಸುತ್ತನಿನ್ನನ್ನೊಮ್ಮೆ ನೋಡುತ್ತಾನೆ ನನ್ನನ್ನೊಮ್ಮೆ ನೋಡುತ್ತಾನೆ. ಏನು ಹೇಳುತ್ತಾರೋ ಎಂದು ಕುತೂಹಲವಿರಬೇಕು..."

"ಹೌದು ಗುರುದೇವಾ, ಅವನಿಗೊಂದು ಹೆಸರು ಹೇಳಿಬಿಡಿರಿ ಬೇಗ!"

"ಹೌದಪ್ಪ ಹೇಳಬೇಕು. ನಿಮಗಿಬ್ಬರಿಗೂ ನಾಮ ಒಂದೇ ಆದರೆ ವ್ಯವಹರಿಸುವಲ್ಲಿ ವ್ಯತ್ಯಯವಾಗಬಹುದು. ಚೆನ್ನಾಗಿದ್ದ 'ಬಸವ' ನಾಮವನ್ನು ಬಿಡಲಿಕ್ಕೂ ನಮಗಾಗುವದಿಲ್ಲ. ಹಾಗಾದರೆ, 'ಚೆನ್ನಬಸವೇಶ' ಎಂಬ ಹೆಸರು ಆಗಬಹುದೇ ತಾಯೀ ನಾಗಕ್ಕ?"

"ಆಗಬಹುದು ಗುರುದೇವಾ" ಪರದೆಯ ಹೊರಗೆ ಮುಖಚಾಚಿ ಕೈಮುಗಿದು ಹೇಳಿದಳು ನಾಗಲಾಂಬೆ.

"ಚೆನ್ನಾಯಿತು ಹೆಸರು" ಎಂದ ಬಸವಣ್ಣ.

"ಸರಿ ಚೆನ್ನಬಸವೇಶ್ವರ ಕೀತ "ಎನ್ನುತ್ತ ಗುರುಗಳು ತಮ್ಮ ಪವಿತ್ರ

ಕರಾಂಗುಲಿಗಳಿಂದ ಕೂಸಿನ ವಿಶಾಲವಾದ ಹಣೆಗೂ ಇಷ್ಟಲಿಂಗಕ್ಕೂ ಭಸ್ಮಧರಿಸಿ 'ಚೆನ್ನಬಸವೇಶ್ವರ' ಎಂದು ಎರಡೂ ಕಿವಿಗಳ ಹತ್ತಿರ ಪಠಿಸಿದರು. ಬಳಿಕ ಅವರ ಮೊಗದ ಇಂಗಿತವನರಿತು ಕಾಳವ್ವೆ-ಜಾಕಬ್ಬೆಯರು ಮುಂದೆ ಬಂದು ಗುರುಗಳಿಗೆ ವಂದಿಸಿ ಅವರ ಕೈಯಿಂದ ಮಗುವನ್ನು ತೆಗೆದುಕೊಂಡರು, ಗುರುಗಳು ಎದ್ದರು. ನಾಗಲಾಂಬೆಯು ಪರದೆಯ ಹೊರಗೆ ತಲೆಹಾಕಿ ಅಲ್ಲಿಂದಲೇ ಗುರುಪಾದಗಳಿಗೆ ವಂದನೆ ಸಲ್ಲಿಸಿದಳು. ಜಾತವೇದಿಗಳು ಬಸವಣ್ಣನನ್ನು ಮುಂದೆ ಮಾಡಿಕೊಂಡು ಒಳಮನೆಯಿಂದ ಹೊರಗೆ ಬಂದರು. ಅಲ್ಲಿ ಮೊಗಸಾಲೆಯ ತುಂಬ ಗುರುಕುಲದ ಸುಮಂಗಲೆಯರು ಬಾಗಿನದೊಡನೆ ಬಂದು ಸಾಲಾಗಿ ಕುಳಿತಿದ್ದರು. ಗುರುಗಳನ್ನು ನೋಡಿ ಕುಳಿತಲ್ಲಿಯೇ ಎದ್ದು ನಿಂತು ತಲೆವಾಗಿ ಕೈಮುಗಿದರು. ಅವರನ್ನೂ, ಹೂಮಾಲೆಗಳಿಂದ ಅಲಂಕೃತವಾಗಿರುವ ತೊಟ್ಟಿಲವನ್ನೂ ನೋಡಿ ಹರ್ಷಚಿತ್ತರಾಗಿ ಕುಲಪತಿ ಜಾತವೇದಿಗಳು: 'ಕುಳ್ಳಿರಿ ತಾಯಿಗಳಿರಾ ಕುಳ್ಳಿರಿ; ಭುವಿಯ ಬೆಳಗ ಬಂದ ಬಾಲನನ್ನು ನಿಮ್ಮ ಕೈಗಳಿಂದೆತ್ತಿ ತೊಟ್ಟಿಲಲ್ಲಿ ಇಟ್ಟು ತೂಗಿರಿ; ಜೋಗುಳ ಹಾಡಿರಿ. ಮಂಗಲ ಪಾಡಿರಿ. ನಾವೂ ಸಮೀಪದಲ್ಲಿರುವೆವು, ಎನ್ನುತ್ತ ಬಸವಣ್ಣನ ಕೈಹಿಡಿದು ಮೆಲ್ಲನೆ ಮೆಟ್ಟಿಲುಗಳನ್ನಿಳಿದರು. ಅಲ್ಲಿ ಕಾದು ನಿಂತಿದ್ದ ಶಿವದೇವ ಅವರನ್ನು ಬಲಗಡೆಯ ಪುಷ್ಪವಾಟಿಕೆಯಲ್ಲಿ ಕರೆದೊಯ್ದನು.ಸಿದ್ಧಪಡಿಸಿದ ಆಸನದಲ್ಲಿ ಕುಳ್ಳಿರುತ್ತ ಗುರುಗಳು 'ಪುಣ್ಯವಂತ ಶಿವದೇವಾ ನೀನು' ಎಂದು ಭುಜತಟ್ಟಿನುಡಿದರು. ಬಸವಣ್ಣನು ಅಲ್ಲಿಯೇ ಕಲ್ಲುಹಾಸಿನ ಮೇಲೆ ಕುಳಿತನು. ಶಿವದೇವನು ಬರುಹೋಗುವವರನ್ನು ಆದರಿಸುತ್ತ ಅಡ್ಡಾಡುತ್ತಿದ್ದನು.

ಪ್ರಶಾಂತ ಸಮಯ. ಕೃಷ್ಣಾ-ಮಲಾಪಹಾರಿಗಳಸಂಗ ಮದಲ್ಲಿಯ ನಿರ್ಮಲ ನೀರಿನ ಮೇಲೆ, ಕ್ಷಿತಿಜಕ್ಕಿಳಿಯುತ್ತಿದ್ದ ಸೂರ್ಯನ ಹೊಂಗಿರಣಗಳು ಮೂಡಿ, ಮತ್ತೆ ಪರಾವರ್ತನಗೊಂಡ ವರ್ಣಮಯ ಕಿರಣಗಳು ಹೂನಗೆಯ ನಗುವ ಬನದೇವಿಯ ಮೊಗವನ್ನು ಬೆಳಗಿದ್ದವು. ಅಬ್ಬಾ! ಏನು ಶೋಭೆ! ಆ ಸೊಬಗ ಸವಿಯುತ್ತ ಗುರು-ಶಿಷ್ಯರು ಕೆಲ ನಿಮಿಷ ಮೌನವಾಗಿ ಕುಳಿತರು. ಬಳಿಕ ಪಾಠ ಪ್ರವಚನಗಳ ಕೆಲ ವಿಚಾರದಲ್ಲಿ ತೊಡಗಿದ್ದರು. ಅಷ್ಟರಲ್ಲಿ ಒಳಗೆ ನಡೆದ ಜೋಗುಳ ಪದದ ಕೆಲವು ನುಡಿಗಳು ಅವರ ಗಮನವನ್ನು ಸೆಳೆದವು:

ತನ್ನ ಎಚ್ಚರದಲ್ಲೆ ತಾನೆ ಜಗವಾಗಿ
ತನ್ನೊಳಗೆ ತಾನುದಿಸಿ ತಾನೆ ಒಂದಾಗಿ
ತಾನಿಹುದಲ್ಲದೆ ಬೇರಿಲ್ಲವೆನಿಸೀ...। ಮಹಾ
ಜ್ಞಾನಸರೂಪನ ಶಿಶುವು ತಾನೆ ನಲಿದಾಡೀ ಜೋ ಜೋ ॥
ತಾನೆ ತೊಟ್ಟಿಲವಾಗಿ ತಾನೇ ಮಲಗಿರ್ದ,
ತಾನೆ ಜೋಗುಳಪಾಡಿ ತಾನೆ ಕೇಳಿರ್ದ,

ತಾನೆಲ್ಲನೊಳಕೊಂಡು ನಿದ್ರೆಗೈದಿರ್ದಾ...।ಮತ್ತೆ
ತನ್ನಿರವನರಿತು ಕಣ್ತೆರೆದು ನೋಡಿರ್ದಾ, ಜೋ ಜೋ ॥

"ಕೇಳಿದೆಯಾ ಬಸವಣ್ಣಾ? ಜೋಗುಳವೂ ತತ್ತ್ವ ಬೋಧವೇ ಆಗಿದೆ. ಯಾರು ರಚಿಸಿದ್ದಾರೆ ಇದನ್ನು?"

"ಅಕ್ಕನೇ ರಚಿಸಿರಬಹುದು ಗುರುದೇವಾ, ನಿನ್ನೆ ಇಬ್ಬರು ತಂಗಿಯರನ್ನು ಒಳಗೆ ಬರಮಾಡಿಕೊಂಡು ಇದನ್ನು ಕಲಿಸುತ್ತಿದ್ದಳು"

"ನಿನ್ನಳಿಯ ಪರಾತ್ಪರಜ್ಞಾನಿಯಾಗುವ ಸಂಕೇತಗಳು ತುಂಬಾ ಇರು ವವು. ನಮ್ಮ ಸಂಕಲ್ಪಗಳು ಫಲಿಸುವ ಕಾಲ ಸನ್ನಿಹಿತವಾದಂತಿದೆ"

"ತಮ್ಮ ಸಂಕಲ್ಪವೇ ಪರಶಿವಸಂಕಲ್ಪ! ಅದು ಸುಳ್ಳಾಗದು"

"ಶಿವನಿಚ್ಛೆ! ನಾವಿನ್ನು ನಮ್ಮ ಸಮಯಾಚಾರಕ್ಕೆ ತೆರಳಬಹುದೇ ಶಿವ ದೇವಾ?"

"ಆಗಬಹುದು ಗುರುವರ್ಯಾ," ಎನ್ನುತ್ತ ಶಿವದೇವನೂ ಬಳಿಕ ಬಸವ ಣ್ಣನೂ ಗುರುಗಳಿಗೆ ವಂದಿಸಿದರು. ಮತ್ತು ಅವರಿಬ್ಬರು ಗುರುಗಳನ್ನು ಸಾರಂಗ ಮಠದ ಅವರ ನಿವಾಸದ ವರೆಗೆ ಹೋಗಿ ಕಳಿಸಿ ಬಂದರು. ಸಂಗಮನಾಥನ ದೇವಾಲಯದಲ್ಲಿ ಗಂಟೆ ಜಾಗಟೆಗಳು ಮೊಳಗುತ್ತಿದ್ದವು.

ಇತ್ತ ಮಾನಿನಿಯರು ಮಂಗಲ ದ್ರವ್ಯಗಳನ್ನು ಪಡೆದುಕೊಂಡು ನಗುತ್ತ ನಲಿಯುತ್ತ ತಮ್ಮ ನಿವಾಸಗಳಿಗೆ ತೆರಳಿದರು. ನಾಗಮ್ಮ ಒಳಗಿನ ಕೋಣೆಗೆ ಹೋಗಿ ತನ್ನ ಬಿದಿರ ಮಂಚದ ಮೇಲೆ ಕುಳಿತಳು. ಕಾಳವ್ವೆ ತೊಟ್ಟಿಲಲ್ಲಿಯ ಮಗುವನ್ನು ಒಳಗೆ ತಂದು ನಾಗಮ್ಮನ ಕೈಗೆ ಕೊಟ್ಟಳು. ಸಂಗಡಲೇ ಓಡಿ ಬಂದ ಪುಟ್ಟ ಪಶುಪತಿ: 'ಅವ್ವಾ ತಮ್ಮ ನನ್ನ ನೋಡತಾನ, ನೋಡ ಅವ್ವಾ, ಹ್ಯಾಂಗ ನೋಡತಾನ ನೋಡ ಅವ್ವಾ, ನೋಡ...' ಎಂದು ಒಂದೇ ಸವನೆ ಕೂಗುತ್ತಿದ್ದನು. 'ಹೌದೋ ಹೌದು' ಎನ್ನುತ್ತ ಕಾಳವ್ವೆ ಕೂಸಿನ ಬಟ್ಟೆ ಸರಿ ಹೊದಿಸಿ ಕೊಡುತ್ತಿದ್ದಳು. ನಾಗಕ್ಕನಿಗೆ ನಗೆ ಬಂದಿತ್ತು. ಆಕೆ ಒಂದು ಕೈಯಿಂದ ಪಶು ಪತಿಯ ಗಲ್ಲಾ ಹಿಡಿದು; "ಹೌದು ನೋಡಪ್ಪ, ತಮ್ಮ ನಿನ್ನನ್ನೇ ನೋಡತಾನ" ಎಂದಳು. "ತಮ್ಮ ಎಲ್ಲವನ್ನೂ ನೋಡತಾನ, ನಾಳೆ ನಿನ್ನ ಕೂಡ ಆಡತಾನ, ನಿನ್ನ ಕೂಡ ಮಾತಾಡತಾನ ಬಾ" ಎನ್ನುತ್ತ ಕಾಳವ್ವೆ ನಾಗಕ್ಕನ ಅಪ್ಪಣೆ ಪಡೆದು, ಮಗನನ್ನು ಕರಕೊಂಡು ಮನೆಗೆ ಹೋದಳು.

ಮಗುವಿಗೆ ಮೊಲೆ ಕೊಟ್ಟ ನಾಗಲಾಂಬೆಯ ಕಿವಿಯಲ್ಲಿ ಪಶುಪತಿಯ ಲಲ್ಲೆ ಮಾತು ಇನ್ನೂ ನಿನದಿಸುತ್ತಿತ್ತು. ಅದು ಆಕೆಯ ಅದೊಂದು ನೆನಪಿನ ಬಾಗಿಲ ತೆರೆಯಿತು. ಹತ್ತು ತಿಂಗಳ ಹಿಂದೆ, ಅದೇ ನಡೆಗಲಿತ ಪಶುಪತಿ ತಮ್ಮ ಆ ಳಿಕ್ಕಿ

ಆಡಲಿಕ್ಕೆ ಬರುತ್ತಿದ್ದನು. ಒಮ್ಮೆ ತಾಯಿಯು ಕೂಡ ಹೋಗಗೊಡ್ಡವೆ ತನ್ನನ್ನೇ ಅಪಚಿ ಹಿಡಿದಿರಲು, ತಾಯಿ ಕಾಳವ್ವೆ ಸಿಡುಕು ಮೊಗದಿಂದ ಹೊಡೆದು ಒಡಿದು ತನ್ನ ಮಗನನ್ನುಕರೆದೊಯ್ದಾಗ ತನ್ನ ಕರುಳು ಚುರ್ರೆಂದುದು, ಆಗ ತನ್ನಲ್ಲಿ ಹೆಬ್ಬಯಕೆಯೊಂದು ಮೈವೆತ್ತುನಿಂದುದು, ಅವರಿಂದ ಆದ ತನ್ನ ಮನದ ಮ್ಲಾನತೆಗೆ ನೊಂದ ಪತಿಶಿವದೇವನಿಗೆ ತನ್ನ ಇಂಗಿತವನ್ನು ಹೇಳಿದುದು, ಆತನು ಮಮತೇಯಿಂದ ಮಾತನಾಡಿದುದು, ತಾವಿಬ್ಬರು ಮಧುರಭಾವ ಅನುಭವಿಸಿ ದುದು, ಸ್ವಪ್ನದಲ್ಲಿ ಶಿವನು ಪ್ರಸಾದ ನೀಡಿದುದು, ಅದರ ಫಲವಾಗಿ ತಾನು ಗರ್ಭ ಧರಿಸಿದುದು ಇವೆಲ್ಲ * ಸ್ಮೃತಿ ಪಟದ ಮೇಲೆ ಕ್ರಮವಾಗಿ ಮೂಡಿ ಬಂದವು. ಚೆನ್ನಬಸವಣ್ಣ ಮೊಲೆಯುಣ್ಣುವದನ್ನು ಬಿಟ್ಟು ತಾಯಿಯ ಮೊಗವನ್ನು ನಿಟ್ಟಿಸುತ್ತಿದ್ದನು. ತಾಯಿ ಅದನ್ನರಿಯಳು. ಆಕೆಯ ದೃಷ್ಟಿಮಾತ್ರ ಅವನಲ್ಲೇ ನೆಟ್ಟಿತ್ತು. ಆ ಕಾಳವ್ವೆ ಈಗ ಆತ್ಮೀಯಳಾಗಿದ್ದಾಳೆ. ನಚ್ಚಿನ ತಂಗಿಯಾಗಿದ್ದಾಳೆ. ತನ್ನ ಬಾಳಂತಿತನದ ಕೆಲಸ ಆಕೆಯೇ ಮಾಡುತ್ತಾಳೆ. ಪಶುಪತಿ ಇಲ್ಲಿಯೇ ಆಡಲು ಬರುತ್ತಾನೆ. ತನಗೆ ಮುದ್ದಾಗಿದ್ದಾನೆ. ಅದು ಕಾಳವ್ವೆಗೂ ಸಂತೋಷ! ಹೀಗೆ ನಾಗಲಾಂಬೆಯ ಭಾವಮನಗಳು ಆ ನೆನಹಿನಲ್ಲಿ ಲೀನವಾಗಿದ್ದವು. ಶಿವದೇವ ಬಸವಣ್ಣವರು ತನ್ನ ಹತ್ತಿರವೆ ಹಾಯ್ದು ಊಟ ಕ್ಕಾಗಿ ಒಳಗೆ ಹೋದುದೂ ಆಕೆಗೆ ಗೊತ್ತಾಗಿರಲಿಲ್ಲ. ಶಿವದೇವ ಈಚೆಗೆ ಬಂದು ತೇಗಿದಾಗ ಎಚ್ಚತ್ತು ಸ್ವಲ್ಪ ನಾಚಿಕೊಂಡು ಸರಿಯಾಗಿ ಕುಳಿತಳು. ಚೆನ್ನಬಸ ವಣ್ಣನ ಮೈತಟ್ಟಿ ತನ್ನತ್ತ ಹೊರಳಿಸುತ್ತಿದ್ದ ಬಸವಣ್ಣನಿಗೆ " ಊಟವಾಯಿತೇ ನಿಮ್ಮದು? " ಎಂದಳು. "ಆಯಿತಲ್ಲ, ನೀವೆಲ್ಲಿದ್ದಿರಿ? ಈಪಂಡಿತ ಎಲ್ಲಿಗೆ ಕರೆದೊಯ್ದಿದ್ದ" ಎಂದು ಕೈಪರೆಗುಟ್ಟಿ ನಲಿದಾಡಿದನು. ನಾಗಲಾಂಬೆ 'ಎಲ್ಲಿಲ್ಲಪ್ಪ' ಎಂದು ನಸುನಕ್ಕಳು. ಮನಸ್ಸುಮಾತ್ರ 'ಹತ್ತು ತಿಂಗಳ ಹಿಂದೆ' ಎಂದು ಒಳಗೆ ಉತ್ತರ ಕೊಟ್ಟಿತ್ತು.

× × × ×

"ಅವ್ವಾ ಚಿಕ್ಕಿ, ಅವ್ವಾ ಅಲ್ಲಿ ಚಿಕ್ಕಿ, ನೋಡುವ್ವಾ ಅಲ್ಲಿ ಚಿಕ್ಕಿ"

"ಹೌದಪ್ಪ, ಎಲ್ಲಾ ಕಡೆಗೂ ಚಿಕ್ಕಿ."

"ಇವನ್ನೆಲ್ಲಾ ಶಿವನೇ ಮಾಡತಾನೇನವ್ವಾ?"

"ಶಿವನೇ ಮಾಡತಾನ."

"ಎಲ್ಲಿ ಕೂತ ಮಾಡತಾನ? ಯಾತರಿಂದ ಮಾಡತಾನ?"

"ತನ್ನೊಳಗೇ ಮಾಡತಾನ; ತಾನೇ ಆಗತಾನ."

"ತಾನೇ ಆಗತಾನ? ಅವ್ವಾ ಚಿಕ್ಕಿಲ್ಲ ಶಿವ ಏನು?"

* ಈ ಸನ್ನಿವೇಶಗಳ ವಿಶೇಷ ವಿವರಣೆ ನಮ್ಮ 'ಕ್ರಾಂತಿ ಗಂಗೋತ್ರಿ' ಯಲ್ಲ

"ಹೌದು."

"ಆ ಗಿಡ? ಆ ನೀರು? ಅವ್ವಾ ನಾನು? ನೀನು?"

"ಎಲ್ಲಾ ಶಿವ! ಕುಳಿತವರು ಇವರೆಲ್ಲ ಶಿವ! ಹೋಗು"

ಎನ್ನುತ್ತ ನಾಗಮ್ಮ ತಮ್ಮ ಕುಟೀರದ ಬಾಗಿಲಲ್ಲಿ ಚೆನ್ನಬಸವನನ್ನು ಇಳಿಸಿ, ಶಿವದೇವ ಬಸವೇಶರನ್ನು ತೋರಿಸಿ ಒಳಗೆ ಹೋದಳು.

'ಹೌದು ಇವರೆಲ್ಲ ಶಿವ' ಎಂದು ಚೆನ್ನಬಸವಣ್ಣ ಚಪ್ಪಾಳೆತಟ್ಟಿ ನಕ್ಕನು. ಕೈಯೂರಿ ಮೊಗಸಾಲೆಯ ಎರಡು ಮೆಟ್ಟಲು ಹತ್ತಿ ಮೇಲೆ ಬಂದನು. ಅಲ್ಲಿ ಶಿವ ದೇವ ಬಸವೇಶ ಕುಳಿತಿದ್ದರು. ಶಿವಗೋಷ್ಠಿಗೆ ಮಂಗಲವಾದ ಬಳಿಕ ಅವರು ಮುಂದೆ ಬಂದಿದ್ದರು. ಮುಂಚ್ಚಂಜೆಯ ಕತ್ತಲಲ್ಲಿ ಮಗನನ್ನು ಎತ್ತಿಕೊಂಡು ಅವನ ಪ್ರಶ್ನೆಗಳಿಗೆ ಉತ್ತರ ಕೊಡುತ್ತ ನಾಗಮ್ಮ ಸ್ವಲ್ಪ ಸಾವಕಾಶವಾಗಿ ಬಂದಿದ್ದಳು.

ನಕ್ಕು ಕೇಕೆ ಹಾಕಿ ಪಡಸಾಲೆಗೇರಿದ ಚೆನ್ನಬಸವಣ್ಣ ತಂದೆಯ ತೊಡೆಯ ತಟ್ಟಿ ಇವರೆಲ್ಲ ಶಿವ ಎಂದನು. ಮಾವನ ಕೊರಳಿಗೆ ಬಿದ್ದು 'ಇವರೆಲ್ಲ ಶಿವ'ಎಂದು ಒಳಗೆ ಓಡುವವದರಲ್ಲಿದ್ದನು. ಬಸವಣ್ಣ ಅವನನ್ನು ಹಿಡಿದು ಎತ್ತಿಕೊಂಡು. ನಾವೆಲ್ಲ ಅಲ್ಲಪ್ಪ, ನೀನೊಬ್ಬನೇ ಶಿವ' ಎಂದು ಅವನ ಮುಂದಲೆಯನ್ನಾಘ್ರಾಣಿಸಿದನು. 'ಮಾವ ಚಿಕ್ಕ, ಅಲ್ಲಿಲ್ಲ ಚಿಕ್ಕ' ಎಂದು ಅಳಿಯ ಹೊರಗೆ ಕೈ ಮಾಡಲು ಬಸವಣ್ಣ ಅವನನ್ನೆತ್ತಿಕೊಂಡು ಅಂಗಳಕ್ಕಿಳಿದನು. ಆಕಾಶವನ್ನು ನೋಡುತ್ತ ಅವನ ಪ್ರಶ್ನೆ ಗಳಿಗೆ ಉತ್ತರ ಕೊಡುತ್ತ ಸ್ವಲ್ಪ ಹೊತ್ತು ಅಲೆದಾಡಿದನು. ಅಷ್ಟರಲ್ಲಿ ಜಾಕಬ್ಬೆ ಒಳಗೆ ಕರೆದಳು. ಎಲ್ಲರೂ ಪೂಜಾದಿ ಕ್ರಿಯೆಗಳಲ್ಲಿ ತೊಡಗಿದರು.

ಬೆಳಗಿನಲ್ಲಿ ಬೇಗನೆ ಪಶುಪತಿ ಬಂದನು. ಚೆನ್ನಬಸವನನ್ನು ಕೂಗಿ ಕರೆದನು. ತಾಯಿಯೊಡನೆ ಬೇಗ ಎದ್ದಿರುವ ಚೆನ್ನಬಸವಣ್ಣ ಅಷ್ಟರಲ್ಲಿ ಸ್ನಾನ ಮಾಡಿ ಭಸ್ಮ ಧರಿಸಿಕೊಂಡಿದ್ದನು. ಗೆಳೆಯನ ದನಿ ಕೇಳಿ ಹೊರಗೆ ಬಂದನು. ಪಶುಪತಿ ಅವನ ಕೈ ಹಿಡಿದು ಮೆಟ್ಟಿಲುಗಳಿಂದ ಇಳಿಸಿಕೊಂಡನು. ಇಬ್ಬರೂ ಹೂಗಿಡಗಳೆಡೆಗೆ ಓಡಿದರು. ಅಲ್ಲಿ ಗುಚ್ಛಮಲ್ಲಿಗೆಯ ಅಗಲವಾದ ಎಲೆಗಳ ಮೇಲೆ ಮಂಜು ನೀರಿನ ಹನಿಗಳಿದ್ದವು. ಅವು ಎಲೆಗಳಿಗೆ ಅಂಟಿರಲಿಲ್ಲ. ಸುಳಿಗಾಳಿಗೆ ಎಲೆ ತೊನೆದಾಗ ಆ ಹನಿಗಳು ಚಲಿಸಿ ಚಿಕ್ಕಂದವಾಡುತ್ತಿದ್ದವು. ಆ ಮೋಜು ನೋಡುತ್ತ ಈ ಬಾಲಕರು ಕೇಕೆ ಹಾಕಿ ಕುಣಿದರು. ಎಲೆಗಳನ್ನು ಬಾಗಿಸಿ ಬರುವ ಹನಿಗಳನ್ನು ಕೈಯಲ್ಲಿ ಹಿಡಿದು ಚೀಪಿದರು. ಬಳಿಕ ಚಿಕ್ಕ ಗಿಂಡಿಗಳನ್ನು ತಕ್ಕೊಂಡು ಬಾನಿಯ ಲ್ಲಿಯ ನೀರನ್ನು ಎತ್ತಿ ಗಿಡಗಳಿಗೆ ಎರೆದರು. ನಿತ್ಯದಂತೆ ನಿನ್ನೆ ಸಂಜೆ ಗೊತ್ತು ಮಾಡಿದ ಗುಲಾಬಿಯ ಮೊಗ್ಗು ಅರಳಿರುವವೋ ಎಂದು ನೋಡುವ ಸಲುವಾಗಿ ಗಿಂಡಿಗಳನ್ನಿಟ್ಟು ಅತ್ತ ಓಡಿದರು. 'ಇದು ಅರಳಿದೆ, ಅದೂ ಅರಳಿದೆ' ಎಂದು

ಇಬ್ಬರೂ ನಕ್ಕು ನಲಿದರು. ಅಷ್ಟರಲ್ಲಿ ಹಿಂದೆ ಬಂದು ನಿಂತ ಬಸವಣ್ಣನನ್ನು ನೋಡಿ ಚೆನ್ನಬಸವಣ್ಣ:

"ಮಾವಾ ಈ ಮೊಗ್ಗುಗಳನ್ನು ಯಾರು ಅರಳಿಸುತ್ತಾರೆ?"

"ಶಿವನಿಗೆ ಇವು ಅರಳಬೇಕೆಂದು ಇಚ್ಛೆಯಾಗುತ್ತದೆ. ಆ ಇಚ್ಛಾಶಕ್ತಿಯೇ ಅರಳಿಸಿಬಿಡುತ್ತಾಳೆ."

"ಆಕೆ ಎಲ್ಲಿ ಇರತಾಳ? ನಾ ನೋಡಿಲ್ಲ."

"ಹೂ ಅರಳಿದ್ದು ನೋಡಿದೆಯಲ್ಲವೇನು? ಈ ಅರಳುವದೇ ಆಕೆ! ಇದೆಲ್ಲಾ ಹೊಳೆ, ನೀರು, ಗಿಡ, ಬೆಳೆ, ಆಕಳು..."

"ನೀನು?"

"ಹೂಂ, ನಾನು ನೀನು, ಅವ್ವ ಅಪ್ಪ ಎಲ್ಲಾ ಶಿವನೇ ಅಲ್ಲವೇನು? ಶಿವನೊಳಗೆ ಕೂಡಿ ಇದೆಲ್ಲದರಲ್ಲಿಯೂ ಆಕೆಯೇ ತುಂಬಿಕೊಂಡಿದ್ದಾಳೆ. ಈ ಗಿಡ ಬೆಳೆದವು; ಈ ಹೂವು ಅರಳಿದವು. ಮೊನ್ನೆ ಕರು ಹುಟ್ಟಿತಲ್ಲ, ಹುಟ್ಟುವದು ಹಾಲು ಕುಡಿದು ದೊಡ್ಡದಾಗುವದು ಇವೆಲ್ಲ ಶಿವಶಕ್ತಿಯ ರೂಪ! ಆ ಶಕ್ತಿಯೇ ಮಾಡುವ ಕೆಲಸ! ಆಕೆ ಬೇರೆಯಾಗಿ ಕಾಣುವದಿಲ್ಲ. ಶಿವನನ್ನುಬಿಟ್ಟು ಆಕೆಗೆ ಬೇರೆ ಇರಲಿಕ್ಕೂ ಬರುವದಿಲ್ಲ."

ಪಶುಪತಿ ಆತುರದಿಂದ ನುಡಿದ: "ಮಾವಾ ಗುಲಾಬಿ ಹೂವಿನಾಗ ಘಮ ಘಮ ವಾಸನೆ ಅದೆ. ಅದು ಹೊರಗೆ ಕಾಣುವದಿಲ್ಲ."

"ಒಳ್ಳೇದು ಹೇಳಿದೆ ಪಶುಪತಿ, ಜಾಣ ನೀನು! ಸುವಾಸನೆ ಇದೆ. ಆದರೆ ಅದು ಹೂವಿನ ಹೊರಗೆ ಕಾಣದು. ಹಾಗೆಯೇ ಶಿವಶಕ್ತಿ!"

ಈ ಮಾತು ನಡೆಯುತ್ತಿದ್ದಂತೆ, ಬಸವಣ್ಣ ಅಳಿಯನ ಮೈ ಕೈಗೆ ಹತ್ತಿದ ಹಸಿಮಣ್ಣು ಒರಿಸಿ 'ಅವ್ವ ಹಾಲ ಕೊಡತಾಳಂತ ಬಾ' ಎಂದು ಎತ್ತಿಕೊಂಡನು ಚೆನ್ನಬಸವಣ್ಣ ಹೊರಳಿ ನೋಡಿ 'ಪಶುಪತಿ?' ಎಂದನು,

"ಅವನೂ ಬರುತ್ತಾನೆ. ನಡಿ ಪಶುಪತಿ, ಇಬ್ಬರೂ ಹಾಲು ಕುಡಿದು ಮತ್ತೆ ಆಡೀರಂತೆ, ಬಾ."

ಬಸವಣ್ಣ ಇಬ್ಬರನ್ನೂ ಕರಕೊಂಡು ಒಳಗೆ ಹೋದನು. ಆಗ ಪಶುಪತಿಗೆ ನಾಲ್ಕು ಚೆನ್ನಬಸವಣ್ಣನಿಗೆ ಎರಡು ವರುಷಗಳು. ಆಗಲೇ ಚೆನ್ನಬಸವಣ್ಣನಲ್ಲಿಯ ಚಿತ್‌ಪ್ರಭೆಯ ಎಳೆಯಕಿರಣಗಳು ಆತುರಾತುರವಾಗಿ ಹೊರಗೆ ಬರಹತ್ತಿದ್ದವು.

× × × ×

ಜಾತವೇದ ಮುನಿಗಳು ಕೂಡಲ ಸಂಗಮ ಗುರುಕುಲ (ವಿದ್ಯಾ ಪೀಠ) ದ ಅಧಿಪತಿಗಳು. ಶೈವಮತಗಳು ಪರಿಷ್ಕೃತಗೊಂಡು ಹೊಸ ವೀರಶೈವದ ರೂಪಸಿದ್ಧಿಗೆ ಆರಂಭವಾದ ಕಾಲವದು. ಈ ದಿಸೆಯಲ್ಲಿ ಅವರ ನೇತೃತ್ವದಲ್ಲಿ

ಈ ವಿದ್ಯಾಪೀಠವು ಮಹತ್ವದ ಕಾರ್ಯ ಕೈಕೊಂಡಿದ್ದಿತು. ಕುಲಪತಿಗಳ ಮೂಲ ಹೆಸರು 'ಈಶಾನ ಗುರು' ಎಂದು. ಪಾಂಡಿತ್ಯ-ಜ್ಞಾನಗಳ ಕಳೆ ಅವರ ಹುಟ್ಟಿನೊಡನೆ ಕಾಣುತ್ತಿದ್ದುದರಿಂದ ಅವರಿಗೆ ಜಾತ ವೇದ (ಜಾತವೇದಿ) ಎಂಬುದು ಅನ್ವರ್ಥಕ ನಾಮವಾಗಿತ್ತು. ಅವರ ವ್ಯಕ್ತಿತ್ವದ ಪ್ರಭಾವ ಹಿರಿದಾಗಿತ್ತು. ಅವರು ಶಿವಯೋಗದ ಪರಿಪೂರ್ಣತೆಯನ್ನು ಎತ್ತಿ ತೋರಿಸುವ ಶಿವಯೋಗದ ಸಿದ್ಧರು. ಬಾಗೇವಾಡಿಯಲ್ಲಿ ಪಾಶುಪತ ಬ್ರಾಹ್ಮಣರ ಅಗ್ರಹಾರವಿತ್ತು. ಅಲ್ಲಿ ಐನೂರು ವಿದ್ವಾಂಸರ ಬೀಡಾರವಿತ್ತು. ಅದು ವರ್ಣವ್ಯವಸ್ಥೆಯ ಮೇಲು-ಕೀಳೆಂಬ ಅಸಮತೆಯ ಧರ್ಮವನ್ನೇ ಪ್ರತಿಪಾದಿಸುತ್ತಿತ್ತು. ಸಂಗಮನಾಥ ಜಾತವೇದಿಗಳು ಅಲ್ಲಿಗೂ ಹೋಗಿ ಅದನ್ನು ಪ್ರತಿಭಟಿಸುತ್ತಿದ್ದರು. ಹಾಗೊಮ್ಮೆ ಹೋದಾಗ ಮಾದರಸನ ಮಡದಿ ಮಾದಲಾಂಬಿಕೆ ಗಂಡು ಮಗುವನ್ನು ಹೆತ್ತಿದ್ದಳು. ಶಿಶುವಿನ ಚಿಹ್ನೆಗಳನ್ನು ಗುರ್ತಿಸಿದ ಸಂಗಮನಾಥರು ಅದಕ್ಕೆ ಲಿಂಗಧಾರಣ ಮಾಡಿ ಬಸವೇಶ ಎಂದು ಹೆಸರಿಟ್ಟಿದ್ದರು. ಮುಂದೆ ಬಸವಣ್ಣನು ಉಪನಯನವನ್ನು ತಿರಸ್ಕರಿಸಿ ಅಕ್ಕನೊಡನೆ ಸಂಗಮಕ್ಕೆ ಬಂದಾಗ ಅವರಿಗೆ ಅನುಗ್ರಹ ಮಾಡಿ ಗುರುಕುಲದಲ್ಲಿ ಇರಿಸಿಕೊಂಡರು. ಬಸವೇಶನ ವ್ಯಕ್ತಿತ್ವದ ಬಹಿರಂಗವನ್ನು ರೂಪಿಸಿದವಳು ಅಕ್ಕನಾಗಾಯಿಯಾದರೆ ಅವನ ಅಂತರಂಗದ ಘನತೆಯನ್ನು ಹೆಚ್ಚಿಸಿದವರು ಜಾತವೇದಮುನಿಗಳೇ ಆಗಿದ್ದಾರೆ. ಹಾಗೆಯೇ ಈಗ ಮಗು ಚೆನ್ನಬಸವಣ್ಣನಿಗೂ ಅವರ ಕರುಣಾಮೃತ ಪಾನ ಪ್ರಾಪ್ತವಾಗಿತ್ತು.

ಕುಶಾಗ್ರಬುದ್ಧಿಯ ಚೆನ್ನಬಸವಣ್ಣನು ಐದು ವರ್ಷದವನಾದಾಗ ಸರಳವಾಗಿ ಓದುವದಕ್ಕೂ ಮಹತ್ವದ ಮಾತುಗಳನ್ನು ಬರೆದಿಡುವದಕ್ಕೂ ಬಲ್ಲವನಾಗಿದ್ದನು. ತಾಯಿಯೊಡನೆ ಕೂಡಿ ಹಾಡುತ್ತಿದ್ದನು. ಮಾವ ಕಲಿಸಿದ ಆಗಮ ಸೂತ್ರಗಳನ್ನು ಪರಮೋಕ್ತಿಗಳನ್ನು ಕಂಠಪಾಠ ಮಾಡಿ, ಆಡಆಡುತ್ತಲೇ ಅಂದು ತೋರಿಸುತ್ತಿದ್ದನು. ತಂದೆಯೊಡನೆ ತೋಟದಲ್ಲಿ ಕೆಲಸಮಾಡಿ, ಹೊಳೆಯಲ್ಲಿ ಜಳಕಮಾಡುತ್ತಿದ್ದನು. ಅನುಭವಗೋಷ್ಠಿಯಲ್ಲಿ ಇಲ್ಲವೆ . ಅಧ್ಯಯನ ಶಾಲೆಯಲ್ಲಿ ತಂದೆತಾಯಿಗಳ ಅಥವಾ ಮಾವನ ಹತ್ತಿರ ಓರಣವಾಗಿ ಕುಳಿತು ಸುಮ್ಮನೆ ಕೇಳುತ್ತಿದ್ದನು. ಮನೆಗೆ ಬರುವಾಗ ಅವರಿಗೆ ಪರಿಪರಿಯ ಪ್ರಶ್ನೆ ಕೇಳಿ, ತನಗೆ ಗಡುಚೆನಿಸಿದವುಗಳಿಗೆ ವಿವರಣೆ ಪಡೆದ ಮೇಲೆಯೇ ಸಮಾಧಾನ ಹೊಂದುತ್ತಿದ್ದನು. ಹಿರಿಯರಿಗೆ ಏನಾದರೂ ಕೇಳುತ್ತಿರುವದೇ ಅವನ ದಿನದ ಮುಖ್ಯ ಕಾರ್ಯವಾಗಿತ್ತು. ಸಮಂಜಸವಾಗಿರುತ್ತಿದ್ದ ಅವನ ಬೇಕಾದಷ್ಟು ಪ್ರಶ್ನೆಗಳಿಗೆ ಉತ್ತರ ಹೇಳಿ ಅವನೊಡನೆ ಮಾತನಾಡಲು ಎಲ್ಲರಿಗೂ ಆನಂದ. ಜಾತವೇದ ಮುನಿಗಳು ಕೂಡ ವಿರಾಮದ ವೇಳೆಯಲ್ಲಿ ಇವನ ಚಿಕಿತ್ಸಕ ಬುದ್ಧಿಯೊಡನೆ ಚೆಲ್ಲಾಟವಾಡುತ್ತಿದ್ದರು. ಒಂದುಸಲ ಚೆನ್ನಬಸವನ ಕೈ ಹಿಡಿದು

ಮುಂದೆ ನಿಲ್ಲಿಸಿಕೊಂಡು ಕಟ್ಟೆಯ ಮೇಲೆ ಕುಳಿತ್ತಿದ್ದರು. ಮುಂದಿನ ಬಯಲಿನಲ್ಲಿ ಎರಡು ಚಿಕ್ಕ ಹೋರಿಗಳು ಕಾದಾಡುತಿದ್ದವು. ಅವನ್ನು ತೋರಿಸಿ ಕೇಳಿದರು:

"ಚೆನ್ನಾ, ಆ ಬಿಳಿ ಹೋರಿ ಶಿ ವನಲ್ಲವೇ?"

"ಶಿವ ಹೌದರಿ"

"ಆ ಕೆಂಪು ಹೋರಿ?"

"ಆದೂ ಶಿವ."

ಎರಡೂ ಶಿವ ಆಗಿ ಜಗಳಾಡುತ್ತವೇಕೆ ಹೀಗೆ?"

"ತಾನೂ ಶಿವ, ತಾನೂ ಶಿವ, ಎಂಬುವದನ್ನು ಮರತಾವ್ರೀ ಅಜ್ಜಾ ಅವು."

ಭಲೆ ಎಂದು ಬೆನ್ನು ಚಪ್ಪರಿಸಿದರು ಗುರುಗಳು. ಮತ್ತೆ ಕೆಲವು ಸಲ ಆವರು ಅವನಿಗೆ ಪದ-ಪದ್ಯಗಳನ್ನು ಪಠಿಸ ಹೇಳಿ ಆನಂದಿಸುತ್ತಿದ್ದರು, ಕೆಲವಕ್ಕೆ ಬೇಕಂತೆ ತಪ್ಪು ಅರ್ಥ ಹೇಳಿ ಗಾಬರಿಗೊಳಿಸಿ, ನಕ್ಕು ಸರಿಪಡಿಸುತ್ತಿದ್ದರು.

ಗುರುಕುಲದ ಅಜ್ಜ ತನ್ನನ್ನು ಬಿಟ್ಟಕೂಡಲೆ ಓಡಿಬಂದು ಅವರು ಕೇಳಿದು ದನ್ನು ಹೇಳಿದುದನ್ನು ಒಟ್ಟಾಗಿ ತಾಯಿಯ ಮುಂದೆ ಒಂದೇ ಸವನೆ ಉಸಿರು ಆರಿಸದೆ ಹೇಳಿಬಿಡುತ್ತಿದ್ದನು. ಅವನ ಆವೇಗವನ್ನು ನೋಡಿ ನಾಗಲಾಂಬೆಯ ಮೊಗದಲ್ಲಿ ಮುಗುಳ್ನಗೆ ತೇಲುತ್ತಿತ್ತು. ಒಮ್ಮೆ ಚೆನ್ನಬಸವ ಹೀಗೆ ಹೇಳುತ್ತಿರು ವಾಗ ಅಲ್ಲಿಗೆ ಬಂದಿದ್ದ ಬಸವೇಶ ಅವನನ್ನು ಎತ್ತಿ ಹೆಗಲಿಗೇರಿಸಿ, ಲಾಗ ಹೊಡಿಸಿ, ಕೆಳಗಿಳಿಸಿ ಕೈ ಹಿಡಿದು "ಗುರುಗಳ ಹತ್ತಿರ ಹೇಳಿರಬೇಕು; ಈಗ ನನ್ನ ಮುಂದೆ ಹೇಳು ನೋಡತೀನಿ " ಎಂದನು.

'ನೀನೂ ಕೇಳು ಮಾವಾ ಹೇಳುತ್ತೇನೆ"

"ಪಾರಮೇಶ್ವರಾಗಮದ ಷಟ್‌ಸ್ಥಲದ ಒಂದು ಶ್ಲೋಕ ಹೇಳು"

"ಅಹಮೇವ ಜಗತ್ ಸೃಷ್ಟ್ವಾ, ಪುನರ್ಮಯ್ಯೇವ ಲೀಯತೇ'

ಅಹಮೇವ ಸ್ಥಲಂ ವಿದ್ಧಿ ಷಡ್ವಿಧ ಮಮರೂಪಕಂ'

ಮತ್ತ ಅಂತೀನಿನೋಡು ಮಾವಾ,ವಾತುಲದೊಳಗಿನ ಮೂರು ಲಿಂಗಗಳ ಶ್ಲೋಕ ಹೇಳಲಿಯಾ?"

ಬಸವಣ್ಣ ನಗೆಯಿಂದಲೇ ಸಮ್ಮತಿ ಸೂಚಿಸಿದನು.

"ತನುತ್ರಯ ಗತಾನಾದಿ ಮಲತ್ರಯಮಸೌಗುರುಃ

ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯಮುಪಾದಿಶತ್

ಇಷ್ಟಲಿಂಗಂತು ಬಾಹ್ಯಾಂಗೇ ಪ್ರಾಣಲಿಂಗೇ ತಥಾಂತರೇ

ಭಾವಲಿಂಗು ತಥೈವಾಸ್ತಿ ಆತ್ಮಾಂಗೆ ಸುಪ್ರತಿಷ್ಠಿತಂ "

ಹೇಳಹೇಳುತ್ತ ಚೆನ್ನಬಸವ ಮಾವನ ಕೈಯಿಂದ ಕೈಬಿಡಿಸಿಕೊಂಡು ಹೊರಗೆ ಓಡಿದನು

"ಯಾವಾಗಲೂ ಯಾವನೊಂದನ್ನು ಪಠಿಸುತ್ತ ಇಲ್ಲವೆ ಬಾಯಲ್ಲಿ ಗುಣು ಗುತ್ತ ಓಡಾಡುತ್ತಾನೆ, ಹಸಿವೆಯ ಪರಿವೆಯೇ ಇಲ್ಲ" ನಾಗಲಾಂಬೆ ತಾಯಿಗರು ಳಿನ ಮತ್ತೊಂದು ಪದರಿನ ದನಿ ತೆಗೆದಳು.

"ಆತ್ಮದಾಗ ತ.ಂಬತಾನಲ್ಲ, ಹೊಟ್ಟೆಯ ಆಹಾರಕ್ಕೆ ಹೊತ್ತೆಲ್ಲಿ ಅವನಿಗೆ? ಎಲ್ಲ ಪ್ರಾಧ್ಯಾಪಕರ ಕಡೆಗೂ ಹೋಗುತ್ತಾನೆ.ಏನಾದರೂ ಕೇಳುತ್ತಾನೆ. ಎಲ್ಲರೂ ಇವನ ಮುದ್ದು ಮಾತಿಗೆ ಪ್ರೀತಿ ಮಾಡಿ ಹೇಳುತ್ತಾರೆ. ಬಲು ಚುರುಕು ಬುದ್ಧಿ ಎನ್ನುತ್ತಾರೆ.ನಾನಂತೂ ನನ್ನ ಓದು ನಿಲ್ಲಿಸಿ ಬೇಸರಪಡದೆ ಇವನಿಗೆ ಹೇಳಬೇಕು. ಹೇಳದಿದ್ದರೆ ಬಿಡುವಂತಿಲ್ಲ. ಆದರೆ ಒಮ್ಮೆ ಕೇಳಿದ್ದನ್ನು ಮತ್ತೆ ಕೇಳುವದಿಲ್ಲ. ನೆನ ಪಿಟ್ಟುಕೊಂಡಿರುತ್ತಾನೆ. ಬೇಕಾದಾಗ ವಿಶದವಾಗಿ ಮರಳಿ ಹೇಳುತ್ತಾನೆ. ಸುಗಂಧ ಬಂಧುರದ ಬಳ್ಳಿಯಂತೆ ಮೊಳಕೆಯಲ್ಲಿಯೇ ಪರಿಮಳ ಬೀರುತ್ತಿರುವ ಹಾಗಿ ದ್ದಾನೆ ನೋಡಕ್ಕ ನಿನ್ನ ಮಗ!"

"ನೀನೂ ಹಾಗೆಯೇ ಇರುವೆಯಲ್ಲಪ್ಪಾ! ಮಾವನಂತೆ ಅಳಿಯ!" ಎಂದಳು ನಾಗಲಾಂಬೆ.

ಚೆನ್ನಬಸವಣ್ಣನಿಗೆ ಏಳುವರ್ಷಗಳಾದವು, ಈಗ ಅವನು ಪ್ರೌಢಪಾಠಕರೊ ಡನೆ ಅಧ್ಯಯನ ನಡೆಸಿದ್ದಾನೆ.ಪಾಠಪ್ರವಚನಗಳನ್ನುಗಮನವಿಟ್ಟು ಆಲಿಸುತ್ತಾನೆ. ಪ್ರಶ್ನೆಕೇಳಿ ಸ್ಪಷ್ಟೀಕರಣ ಪಡೆಯುತ್ತಾನೆ. ಮುಂದೆ ಒಂದೆರಡು ವರ್ಷಗಳಲ್ಲಿಯೇ ಶಾಸ್ತ್ರದ ವಾಕ್ಯಗಳಿಗೆ ಟೀಕೆ ಬರೆಯಹತ್ತಿದನು. ಬಾಗೇವಾಡಿಯಿಂದ ಬಂದಾಗ ಬಾಲಕ ಬಸವಣ್ಣನ ಬಹಳ ಬುದ್ಧಿವಂತಿಕೆ ಅಶ್ರಯದವರನ್ನೆಲ್ಲ ಅಚ್ಚರಿಗೊಳಿಸಿತ್ತು. ಅದನ್ನು ಮೀರಿಸುವ ಪಾಂಡಿತ್ಯ ಪ್ರತಿಭೆಗಳ ಮುಂಗುರುತು ಇವನಲ್ಲಿ ಕಾಣುವ ದೆಂದು ವಿದ್ವಾಂಸರು ನುಡಿಯುತ್ತಿದ್ದರು.

ಈ ಹೊತ್ತಿಗೆ ಶಿವದೇವನು ತನ್ನ ಸಹಚರರೊಡನೆ ದೇಶಾಂತರ ಹೋಗಿ ಬಿಟ್ಟನು, ಎಲ್ಲಿ ಸಿದ್ಧರು. ಎಲ್ಲಿ ಯೋಗಿಗಳು ಯಾವ ಕ್ಷೇತ್ರದಲ್ಲಿ ಏನು ಮಹಿಮೆ ಯಿದೆ ಎಂದು ಆ ಆ ದರ್ಶನಕ್ಕಾಗಿ ಅವರು ಅಲ್ಲಲ್ಲಿ ಹೋಗಿ ಬರುತ್ತಿದ್ದರು. ಈ ಗೀಳು ಬೆಳೆದು ಶಿವದೇವ ಕೊನೆಗೊಮ್ಮೆ ಹೋದವನು ಬರಲೇ ಇಲ್ಲ. ಅಕ್ಕ ನಾಗಮ್ಮನಿಗೆ ಬಹಳ ವ್ಯಥೆಯಾದರೂ ಶಿವಭಕ್ತಿಯಿಂದ ಸಾಧಿಸಿದ ಸಂಯಮದ ನೆರವಿನಿಂದ ಅದನ್ನು ಮನಸ್ಸಿನಿಂದ ಮಾಣಿಸಿದಳು. ಇನ್ನು ಆಕೆಯ ಸಂಸಾರವೇ ಬೇರೆ ಇಲ್ಲ. ಅದು ಬಸವಣ್ಣನಲ್ಲಿಯೇ ಒಂದುಗೂಡಿತ್ತು. ಚೆನ್ನಬಸವಣ್ಣನ ಭವಿ ಷ್ಯತ್ತಿನ ಚಿಂತೆಯೂ ಆಕೆಗಿರಲಿಲ್ಲ. ಲೋಕಮಾನ್ಯನಾಗಲಿರುವ ಬಸವಣ್ಣನ ಸೋದರಳಿಯನು ಅತ!

ಇಷ್ಟರಲ್ಲಿ ಬಸವಣ್ಣ ಗುರುಕುಲದ ತನ್ನ ಅಧ್ಯಯನ ಮುಗಿಸಿಕೊಂಡಿದ್ದನು. ಆದರೂ ಕುಲಪತಿಗಳ ಆಶೆಯಂತೆ ವಿಶೇಷ ಸಾಧಕನಾಗಿ ಉಳಿದಿದ್ದನು. ಶಾಸ್ತ್ರಗಳನ್ನು ಅನುಭವದ ಒರೆಗೆ ಹಚ್ಚುವದಕ್ಕಾಗಿ ಮುಂದಿನ ನಾಲ್ಕಾರುವರ್ಷ ಸಂಚಾರವನ್ನೂ ಏಕಾಂತ ವಾಸವನ್ನೂ ಕೈಕೊಂಡನು. ಬಸವಣ್ಣನಿಲ್ಲದಾಗ ಚೆನ್ನ ಬಸವಣ್ಣನ ವಿದ್ಯಾಭ್ಯಾಸದ ಮೇಲು ನೋಟ ನಾಗಕ್ಕನಿಗೆ ಇರುತ್ತಿತ್ತು. ಲಾಲನೆ ಪಾಲನೆಯಂತೂ ಸರಿಯೇ!

ಒಂದು ದಿನ ಹನ್ನೆರಡು ಗಳಿಗೆಯ ಹೊತ್ತು. ನಾಗಲಾಂಬೆ ಚೆನ್ನಬಸವನ ಬರುವ ನಿರೀಕ್ಷಿಸುತ್ತ ಬಾಗಿಲಲ್ಲಿ ನಿಂತಿದ್ದಳು. ಅವಸರದಿಂದ ಬರುತ್ತಿದ್ದ ಚೆನ್ನಬಸವಣ್ಣ ತಾಯಿಯನ್ನು ನೋಡಿ. ಅಲ್ಲಿಂದಲೇ ಅತಿ ಉತ್ಸಾಹದಿಂದ ಹೇಳಿದನು: "ಅವ್ವಾ, ಆ ಕಡೆಯಿಂದ ಒಬ್ಬ ಅಯ್ಯನವರು ಬಂದಿದ್ದಾರೆ ಗುರುಗಳ ಹತ್ತಿರ, ವಚನಗೀತೆಗಳಂತೆ. ನಾಲ್ಕು ಹಾಡಿದರು. ನಾನು ಬರೆದುಕೊಂಡು ಬಂದಿದ್ದೇನೆ. ಹೇಳುತ್ತೇನೆ ನೋಡು" ಬಾಗಿಲಲ್ಲಿಯೇ ನಿಂತು ಅವುಗಳನ್ನು ಪಠಿಸಿದನು. ಅವನ ತಲೆಯ ಮೇಲೆ ಕೈಯಿಟ್ಟು ನಿಂತ ತಾಯಿ ಮುದದಿಂದ ಆಲಿಸಿದಳು:

'ಮಹಾದೇವನ ಮರೆದವಂಗೆ ಮಾಯಾಂಗನೆ ಮಾರಿಯಾದಳು;
ಸತ್‌ಕ್ರೀ ಸಜ್ಜನ ಯುಕ್ತಿಯಿಂದ
ಸದಾಶಿವನನರಿಯಲು ಉಮೆಯಾದಳು.
ಇಂತೀ ಗುಣವ ಮರೆದಡೆ ಮಾಯೆಯಾಗಿ
ಅರಿದಡೆ ಉಮೆಯಾಗಿ, ತನಗನ್ಯವಿಲ್ಲದೆ
ಢಕ್ಕೆಯ ಉಲುಹು ಅಡಗುವದಕ್ಕೆ ಮುನ್ನವೆ
ಕಾಲಾಂತಕ ಭೀಮೇಶ್ವರಲಿಂಗವನರಿಯಬೇಕು'

ಶಾಸ್ತ್ರದಲ್ಲಿ ಕೇಳುವದಕ್ಕಿಂತ ಸುಲಭವಾಗಿ ತಿಳಿಯಿತು ನೋಡವ್ವಾ ನನಗೆ! ಎಷ್ಟು ಅರ್ಥ ಇದೆಯಲ್ಲಾ ಇದರಲ್ಲಿ? ಇನ್ನೊಂದನ್ನು ನೋಡು:

'ಎನ್ನ ಒಡಲಾದರೆ ಎನ್ನಿಚ್ಛೆಯಂತಿರದೇ?
ನಿನ್ನ ಒಡಲಾದರೆ ನಿನ್ನಿಚ್ಛೆಯಂತಿರದೇ?
ಅದು ಎನ್ನೊಡಲು ಅಲ್ಲ; ನಿನ್ನೊಡಲು ಅಲ್ಲ.
ಅದು ನೀಮಾಡಿದ ಜಗದ ಬಿನ್ನಾಣದೊಡಲು ಕಾಣಾ ರಾಮನಾಥಾ'

ಇದೇನು ಸಣ್ಣಮಾತೇ ಅವ್ವಾ ಕನ್ನಡದಲ್ಲಿ? ಸಂಸ್ಕೃತದ ಶಾಸ್ತ್ರಗಳಲ್ಲಿ ಇನ್ನಾವ ಮಹಾ? ಭಕ್ತಿ ಇಲ್ಲದ ಜನ ಹೇಗಿರುತ್ತಾರೆಂಬುವದನ್ನು ನೋಡಿಲ್ಲಿ:

"ಎಡರಡಸಿದಲ್ಲಿ ಮೃಡ, ನಿಮ್ಮ ನೆನೆವರು.
ಎಡರಡಸಿದ ವಿಪತ್ತು ಕಡೆಗಾದೊಡನೆ
'ಮೃಡ, ನಿಮ್ಮ ನೆನೆಯರು ಕಾಣಾ ರಾಮನಾಥಾ'

ಎಷ್ಟು ಸೊಗಸಾಗಿವೆ! ಇನ್ನೊಂದು ಹೀಗೆಯೇ ಇದೆ :

'ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ,
ಇರುಳೆಲ್ಲ ನಡೆದನಾ ಸುಂಕಕ್ಕಂಜಿ.
ಕಳವೆಯೆಲ್ಲ ಹೋಗಿ ಬರಿಯ ಗೋಣಿ ಉಳಿಯಿತ್ತು.
ಅಳಿಮನದವನ ಭಕ್ತಿ ಇಂತಾಯಿತ್ತು ರಾಮನಾಥ.'

ಎಂಥ ಮಾತು ಅವ್ವಾ ಇವು? ಮತ್ತೆ ಮತ್ತೆ ಹಾಡಬೇಕೆನಿಸುತ್ತಿದೆ ನನಗೆ!"

"ಹೌದಪ್ಪ ಅಷ್ಟು ಚೆನ್ನಾಗಿವೆ.ಅಷ್ಟು ಚೆನ್ನಾಗಿ ಜ್ಞಾನ ಮಾಡಿಕೊಡುತ್ತವೆ. ಇವುಗಳಿಗೆ ವಚನಗೀತ ಅನ್ನುವರು. ನೀನು ಮೊದಲು ಹೇಳಿದ್ದನ್ನು ನಾನು ಇದೇ ಮೊದಲು ಕೇಳಿದ್ದು. ಆ ಮೇಲೆ ಪಠಿಸಿದ ಗೀತೆಗಳು ದೇವರದಾಸಿಮಯ್ಯನ ವಚನಗಳು. ಅವು ಬಹಳಷ್ಟು ಎರಡು ವರ್ಷಗಳ ಹಿಂದೆಯೇ ಆಶ್ರಮಕ್ಕೆ ಬಂದಿದ್ದವು. ಅವುಗಳನ್ನು ಆ ಕಡೆಯ ಅಯ್ಯನವರ ಬಾಯಿಂದ ಕೇಳಿ ನಿಮ್ಮ ಮಾವ ಬೆರಗಾಗಿ ಬಿಟ್ಟನು. ಅವನ್ನೆಲ್ಲ ಸಂಗ್ರಹಿಸಿಟ್ಟಿದ್ದಾನೆ. ಆಗ ಅವನು ಅವುಗಳನ್ನು ಮನವಾರೆ ಮೆಚ್ಚಿ ಏನು ಹಾಡಿದನೆಂಬುದು ನಿನಗೆ ಗೊತ್ತಿರಲಿಕ್ಕಿಲ್ಲ ಕೇಳು:

ಹಾಲ ತೊರೆಗೆ ಬೆಲ್ಲದ ಕೆಸರು; ಸಕ್ಕರೆಯ ಮಳಲು
ತವರಾಜದ ನೊರೆತೆರೆಯಂತೆ ಆದ್ಯರ ವಚನವಿರಲು,
ಕೆರೆ ಬಾವಿಯ ತೋಡಿ, ಉಪ್ಪುನೀರನುಂಬವನ ವಿಧಿಯಂತೆ
ಆಯಿತ್ತೆನ್ನ ಮತಿ ಕೂಡಲ ಸಂಗಮ ದೇವಾ,

"ನಿಜ ನಿಜ ಅವ್ವಾ, ಮಾವ ಕೂಡಿಸಿದ ವಚನಗೀತೆ ನಾನು ನೋಡಬೇಕು."

"ನೋಡಲೇ ಬೇಕು. ಹಾಗೆ ತೋರಿಸದೆ ತಿಳಿಸಿಹೇಳದೆ ಇರುತ್ತಾನೇನು ಅವನು? ಅಂತಹ ಘನವಾದ ವಿಚಾರದ ಸುಲಭ ಗೀತೆಗಳು ಅವು! ಮಹಾನುಭಾವ ಶರಣರ ಅನುಭಾವದ ವಾಣಿಗಳು ಅವು! ದೇವರ ದಾಸಿಮಾರ್ಯರೇ ಈ ನುಡಿಗಳ ಬಗೆಗೆ ಹೇಳಿದ್ದು ಹೀಗಿದೆ."

"ಏನವ್ವಾ ಅದು?"

"ಕಡೆಗೋಲಿಲ್ಲದ ಬಂಡಿ ಹೊಡೆಗೆಡುವುದ ಮಾಣ್ಬುದೇ?
ಕಡುಗೋಲು ಬಂಡಿಗಾಧಾರ!
ಕಡು ದರ್ಪವೇರಿದ ಒಡಲೆಂಬ ಬಂಡಿಗೆ
ಮೃಡಶರಣರ ನುಡಿಗಡಣವೇ ಕಡೆಗೋಲು ಕಾಣಾ ರಾಮನಾಥ!

ದಾಸಿಮಾರ್ಯರು ತಮಗಿಂತ ಮೊದಲಿನ ಮೃಡಶರಣರ ವಚನಗೀತೆಗಳ ನೋಡಿ ಅನುಭವ ಪಡೆದಿದ್ದಾರೆ. ಮನುಷ್ಯನು ದಾರಿ ಬಿಟ್ಟು ಬೀಳದಂತೆ ಅವು ಕಾಪಾಡುತ್ತವೆ ಎಂದಿದರರ್ಥ."

"ಇಂದು ಬಂದ ಅಯ್ಯನವರು ತಂದ ವಚನಗಳನ್ನೆಲ್ಲ ಇಂದು ಸಂಜೆಯ ಗೋಷ್ಠಿಯಲ್ಲಿ ಪಠಣ ಮಾಡಿಸುತ್ತಾರಂತೆ. ನಾನು ಅವುಗಳನ್ನು ಬರೆದುಕೊಳ್ಳುತ್ತೇನೆ. ಮಾವನು ಬರೆದುಕೊಂಡ ವಚನಗಳನ್ನು ನನಗೆ ತೋರಿಸವ್ವಾ"

"ಒಳ್ಳೇದು ನೋಡಿ ತೆಗೆದುಕೊಡುತ್ತೇನೆ."

ಸಂಸ್ಕೃತ ಶ್ಲೋಕ ಕಂಠಪಾಠ ಮಾಡಬೇಕು. ಅರ್ಥಹೇಳಿಸಿಕೊಳ್ಳಬೇಕು. ಇವುಗಳನ್ನು ಓದಿದರೆ ಗಹನಾರ್ಥಸಹ ಈಗಲೇ ತಿಳಿದುಬಿಡುತ್ತದಲ್ಲವ್ವಾ! ಹಾಡಲಿಕ್ಕೊ ಚಂದವಾಗಿವೆ. ಇವುಗಳನ್ನೆಲ್ಲ ಹಾಡಬೇಕು. ಇಂಥವುಗಳನ್ನೇ ಬರೆಬೇಕು ಹೌದಲ್ಲವೇನವ್ವಾ?"

"ಹಾಗೆಯೇ ಮಾಡುವೆಯಂತೆ. ಈಗ ಹಸಿದಿಲ್ಲವೇ ನಡೆ ಪ್ರಸಾದಕ್ಕೆ"

× × × ×

ಅಕ್ಕನಾಗಮ್ಮನದು ಅದೆಂತಹ ಜನ್ಮಸಾರ್ಥಕತೆ! ಆಕೆಯ ಜೋಪಾನದಲ್ಲಿ ಎರಡು ಎಳೆಯ ಮರಗಳು ಬೆಳೆಯುತ್ತಲಿವೆ. ಒಂದು ತೀರ ಚಿಕ್ಕದು. ಒಂದು ಸ್ವಲ್ಪ ಹಿರಿಯದು. ಅವು ಗಳಗಳನೆ ಬೆಳೆದು ಪಲ್ಲವಿಸುತ್ತಿರುವದನ್ನು ನೋಡುತ್ತಿರುವದೇ ತನ್ನ ಭಾಗ್ಯವೆಂದು ಭಾವಿಸಿದ್ದಾಳೆ. ಇವೆರಡು ಮಹಾವೃಕ್ಷಗಳಾಗಿ, ಅಸಂಖ್ಯಾತ ಬೆಂದ ಜೀವಿಗಳಿಗೆ ತಣ್ಣೆಳಲನ್ನೂ ಸುಖ ಶಾಂತಿಗಳನ್ನೂ ನೀಡುವ ಸತ್‌ಸಂಕಲ್ಪವನ್ನು ತಾಳಿದ್ದಾಳೆ. ಅದನ್ನೆ ತನ್ನ ಬಾಳಗುರಿಯಾಗಿಸಿದ್ದಾಳೆ.

ಆ ದಿನ ಮೊದಲು ಗೊಂಡು ಅದ್ಯರ ವಚನಗಳ ನಿರೀಕ್ಷಣೆಯಲ್ಲಿ ಚೆನ್ನಬಸವಣ್ಣನ ಆಸಕ್ತಿ ಹೆಚ್ಚಾಗಹತ್ತಿತ್ತು. ಅವುಗಳನ್ನು ತಾನು ಸಂಗ್ರಹಿಸಿದ ಆಧ್ಯಾತ್ಮಿಕ ಶಾಸ್ತ್ರವಾಕ್ಯಗಳ ರಹಸ್ಯಾರ್ಥಗಳಿಗೆ ಸರಿಹೋಲಿಸಿ ನೋಡಹತ್ತಿದನು. ಅದರಲ್ಲಿ ಅವನಿಗಾಗುತ್ತಿರುವ ಆನಂದ ಅಪಾರ! ಈ ಸಲ ದೀರ್ಘ ಸಂಚಾರದಿಂದ ಬಹಳ ದಿವಸಕ್ಕೆ ಮರಳಿದ ಬಸವಣ್ಣನು ಅಳಿಯನ ಈ ಸಾಹಸಮಯ ಜಿಜ್ಞಾಸೆಗೆ ಬಹಳ ಸಂತೋಷಪಟ್ಟನು. ಇಬ್ಬರೂ ಆ ವಚನಗೀತೆಗಳ ಅಧ್ಯಯನಕ್ಕೂ ರಚನೆಗೂ ತೊಡಗಿದರು.

ನಾಗಮ್ಮ-ಬಸವೇಶರ ಸೋದರಮಾವ ಬಲದೇವಮಹಾಮಂತ್ರಿ ಕಲ್ಯಾಣದಿಂದ ಸಂಗಮದ ಗುರುಕುಲಕ್ಕೆ ಬಂದಿದ್ದಾನೆ. ತನ್ನ ಮಗಳು ಗಂಗಾಂಬೆಯನ್ನು ಬಸವೇಶನಿಗೆ ಕೊಟ್ಟು ಮದುವೆ ಮಾಡಬೇಕೆಂಬುದು ಅವನ ಇಚ್ಛೆಯಾಗಿದೆ. ಕುಲಪತಿಗಳೊಡನೆ, ನಾಗಲಾಂಬೆಯೊಡನೆ,ಆ ವಿಚಾರದ ಮಾತುಕತೆ ನಡೆಸಿದ್ದಾನೆ. ಈ ಸಂದರ್ಭದಲ್ಲಿ ಒಮ್ಮೆ ತಾಯಿಯೊಬ್ಬಳೆ ಮನೆಯಲ್ಲಿರುವದನ್ನು ನೋಡಿಕೊಂಡು ಚೆನ್ನಬಸವಣ್ಣ ಹತ್ತಿರ ಬಂದು ಕೇಳುತ್ತಾನೆ:

"ಅವ್ವಾ, ಕಲ್ಯಾಣದ ಕಕ್ಕ ಬಂದಾಗಿನಿಂದ ನಮ್ಮ ಮಾವ ಮುಖ ಸಪ್ಪಗೆ ಮಾಡಿಕೊಂಡು ಆಶ್ರಮದಾಚೆಯಲ್ಲಿ, ನದೀ ತೀರದಲ್ಲಿ, ಸ್ವಲ್ಪ ದೂರವಾಗಿಯೇ ಅಡ್ಡಾಡುತ್ತಾನಲ್ಲ ಏಕೆ?"

"ಕಲ್ಯಾಣದ ಕಕ್ಕ ಗಂಗಕ್ಕನನ್ನು ನಿಮ್ಮ ಮಾವನಿಗೆ ಕೊಟ್ಟು ಮದುವೆ ಮಾಡುವ ವಿಚಾರ ನಡೆಸಿದ್ದಾನೆ. ಅದಕ್ಕಾಗಿ ನಿಮ್ಮ ಮಾವ ಗಾಢವಾದ ಆಲೋಚನೆಯಲ್ಲಿ ಮುಳುಗಿದ್ದಾನೆ."

"ಮೊದಲೇ ಮದುವೆ ಇಷ್ಟು ತಲೆ ಕೆಡಿಸುತ್ತಿದ್ದರೆ ಅದನ್ನೇಕೆ ಮಾಡಿಕೊಳ್ಳ ಬೇಕು? ಬಿಟ್ಟುಬಿಡುವದು ಒಳ್ಳೆಯದಲ್ಲವೇನವ್ವಾ?"

ನಾಗಮ್ಮನಿಗೆ ನಗು ಬಂತು "ಹಾಗಲ್ಲಪ್ಪ"

"ಮತ್ತೇನವ್ವಾ? ಮಾವ ನನಗೆ ಇಂದು ಏನೂ ಹೇಳಿಲ್ಲ: ಬರೆದದ್ದು ನೋಡಿಲ್ಲ. ಮದುವೆಯಾದ ಮೇಲೇನಿನ್ನು? ಅದರಿಂದ ಏನು ಉಪಯೋಗ?

"ಉಪಯೋಗವಿದೆ; ನೋಡು ಲೋಕದ ಜನವೆಲ್ಲ ಮದುವೆಯಾಗಿ ಸಂಸಾರಿಕರಾಗಿರುತ್ತಾರೆ. ಅವರಿಗೆ ಒಳ್ಳೆಯ ನಡೆನುಡಿಗಳನ್ನು ಹೇಳಲಿಕ್ಕೂ ನಡೆದು ತೋರಿಸಲಿಕ್ಕೂ ಮದುವೆಯಾದರೇ ಬರುತ್ತದೆ. ಶಿವಭಕ್ತಿಯ ಕ್ರಿಯೆಗಳಿಗೂ ಬಹಳ ಕೆಲಸಮಾಡಲಿಕ್ಕೂ ಅನುಕೂಲವಾಗುತ್ತದೆ.

"ಇಲ್ಲದಿದ್ದರೆ?"

"ಇಲ್ಲದಿದ್ದರೆ ಬ್ರಹ್ಮಚಾರಿಯಾದವನು ತಾನೊಬ್ಬನೇ ಸದ್ಗತಿಯನ್ನು ಸಂಪಾದಿಸಬಹುದು. ತನ್ನ ಜ್ಞಾನವನ್ನು ಬುದ್ಧಿವಂತರಿಗೆ ಮಾತ್ರ ಬೋಧಿಸ ಬಹುದು. ಅದನ್ನು ಬರೆದಿಡಬಹುದು. ತಾನು ಪೂಜ್ಯನಾಗಿ ಪ್ರತ್ಯೇಕವಾಗಿ ಇರ ಬೇಕಾಗುವದು.

"ಸರಿಯಾಯ್ತು: ನೀವೆಲ್ಲಾ ಮಾವನಿಗೆ ಮದುವೆ ಮಾಡಬೇಕೆನ್ನುವಿರಲ್ಲವೇ?"

"ಹೌದು"

"ಹೋ, ಹಾಗಾದರೆ ನಿಮ್ಮ ಸಲುವಾಗಿ ನಾನೂ ಈಗಲೇ ಎಚ್ಚರದಿಂದಿರ ಬೇಕವ್ವಾ!" ಎಂದು ಚಪ್ಪಳೆ ತಟ್ಟಿ ಹಿಂದೆ ಸರಿದು ಹೊರಳಿ ಹೊರಗೆ ಓಡಿದನು, ನಾಗಮ್ಮ ನಕ್ಕು ಸುಮ್ಮನಾದಳು.

ಬಲದೇವ ಮಹಾಮಂತ್ರಿಯ ಇಚ್ಛೆ ನೆರವೇರಿತು. ಗಂಗಾಂಬೆಯೊಡನೆ ಬಸವೇಶನ ಮದುವೆಯ ಯೋಜನೆಯಾಯಿತು. ಜಾತವೇದ ಮುನಿಗಳು ತಾತ್ವಿಕ ವಿವೇಚನೆಯಿಂದಲೇ ಬಸವಣ್ಣನನ್ನು ಈ ಮದುವೆಗೆ ಒಪ್ಪಿಸಿದರು. ಅಕ್ಕನಾಗಮ್ಮನ ಅಭಿಮತವೂ ಅವರಿಗೆ ಸಹಾಯಕವಾಗಿದ್ದಿತು. ಬಲದೇವ ಮಂತ್ರಿಯು

ಕಲ್ಯಾಣಕ್ಕೆ ಮರಳಿದನು. ಮತ್ತು ಅಲ್ಲಿ ವಿವಾಹದ ಕಾರ್ಯಕ್ರಮ ಗೊತ್ತುಮಾಡಿ ಬಸವೇಶನನ್ನು, ಅವನ ಅಕ್ಕ ಅಳಿಯ ಮಿತ್ರ ಮುಂತಾದವರನ್ನು ಗೌರವಯುತ ವಾಗಿ ಕರೆದುಕೊಂಡು ಬರುವದಕ್ಕಾಗಿ ದಳಬದ್ಧವಾದ ಸರಂಜಾಮುವನ್ನು ಸಂಗ ಮಕ್ಕೆ ಕಳುಹಿದನು. ಅದರೊಡನೆ ಅವರೆಲ್ಲರು ಗುರುಗಳ ಅನುಜ್ಞೆ ಮತ್ತು ಆಶೀರ್ವಾದ ಪಡೆದು ಕಲ್ಯಾಣಕ್ಕೆ ಹೊರಟರು.ಚಿನ್ನಬಸವಣ್ಣನಿಗೆ ಇನ್ನು ಮುಂದೆ ತನ್ನ ಅಧ್ಯಯನ ಎಲ್ಲಿ? ಯಾರಿಂದ?ಹೇಗೆ ಎಂಬುವದೇನೂ ತಿಳಿಯದೆ ಸುಮ್ಮನೆ ಹಿರಿಯರ ಬೆನ್ನು ಹತ್ತಬೇಕಾಗಿತ್ತು. ಅದರಿಂದ ಅವನು ನಿರುತ್ತೇಜಿತನಂತಾಗಿ ದ್ದನು. ಆ ಭಾವವನ್ನರಿತ ನಾಗಲಾಂಬೆಗೂ ಆಲೋಚನೆ. ಚಿನ್ನಬಸವಣ್ಣನ ಅಧ್ಯ ಯನಕ್ಕೆ ದಾರಿಯೇನು? ಬಸವಣ್ಣ ಬಾಲ್ಯದಲ್ಲಿಯೇ ಪಂಡಿತರು ಬೆರಗಾಗುವಷ್ಟು ಪ್ರತಿಭಾವಂತನಾಗಿದ್ದನು. ಈಗ ಬಸವಣ್ಣನೇ ಅಳಿಯನ ಪ್ರತಿಭೆಗೆ ಬೆರಗಾಗು ತ್ತಿದ್ದಾನೆ. ಮಾವನ ಅರಿಕೆಯಲ್ಲಿ ಚಿನ್ನಬಸವಣ್ಣ ಈಗಲೇ ತತ್ತ್ವಾರ್ಥಗಳನ್ನು ಸ್ವೀಕ ರಿಸುತ್ತಿದ್ದಾನೆ. ಇನ್ನು ಬಸವಣ್ಣನ ಅರಿಕೆ ಅವನಿಗೆ ಸಾಧ್ಯವಾದೀತೇ? ಬಸವೇ ಶನ ಬಾಳಬಗೆ ಹೇಗೆ ರೂಪಗೊಳ್ಳುವದೋ ತಿಳಿಯದು. ಅವನ ಮದುವೆಯ ನಂತರ ಮಗನೊಡನೆ ಮರಳಿ ಸಂಗಮಕ್ಕೆ ಬರಬೇಕಾದೀತೇನೋ?" ಎಂದು ಆಲೋಚಿಸುತ್ತಿದ್ದಳು.

ಬಸವೇಶನು ತನ್ನ ಭವಿಷ್ಯಜ್ಜೀವನದ ಬಗೆಗೆ ಯಾವ ಗೊತ್ತು ಗುರಿ ಯನ್ನೂ ಅರಿಯದಿದ್ದನು.'ಬಸವಣ್ಣಾ ಲೋಕಕಲ್ಯಾಣಕ್ಕಾಗಿ ನಿನ್ನ ಕರ್ತವ್ಯ ಕಲ್ಯಾ ಣದಲ್ಲಿದೆ ತೆರಳು' ಎಂಬ ಗುರುಗಳ ಆದೇಶವನ್ನು ಮಾತ್ರ ತಲೆಯಲ್ಲಿ ಹೊತ್ತು ನಡೆದಿದ್ದನು.

ಹೀಗೆ ಒಂದಿಲ್ಲೊಂದು ಬಗೆಯಿಂದ ಈಶ್ವರೀ ಪ್ರೇರಣೆಯ ಪರಿಣಾಮ ವಾಗಿ ಕಲ್ಯಾಣಗಮನ ಸಂಭವಿಸಿತ್ತು.

—೦—

# ೨. ಜ್ಞಾನಚೇತನ

ಬಾಗೇವಾಡಿಯಿಂದ ಮಾದಿರಾಜನೂ ಮಗನ ಮದುವೆಗೆ ಬಂದಿದ್ದನು. ಬಿಜ್ಜಳರಾಜನು ಬಸವಣ್ಣನ ಬುದ್ಧಿಗುಣಗಳ ಕೀರ್ತಿಯನ್ನು ಮೊದಲೇ ಕೇಳಿದ್ದನು. ತನಗೆ ಹಲವು ಬಗೆಯಿಂದ ಉಪಕಾರ ಮಾಡಿದ ಮಂತ್ರಿ ಬಲದೇವನ ಒಬ್ಬಳೇ ಮಗಳು ಗಂಗಾಂಬೆ! ಆದ್ದರಿಂದ ಆ ರಾಜನು ಅವರಿಬ್ಬರ ಮದುವೆಯನ್ನು ತಾನೇ ನೇತೃತ್ವ ವಹಿಸಿ ವಿಜೃಂಭಣೆಯಿಂದ ನೆರವೇರಿಸಿದನು. ಬಸವೇಶನನ್ನು ಮದುವೆಯ ಮಂಟಪದಲ್ಲಿ ಪ್ರತ್ಯಕ್ಷವಾಗಿ ನೋಡಿದನು. ಪ್ರತ್ಯೇಕವಾಗಿ ಬರಮಾಡಿಕೊಂಡು ಪರಿಶೀಲಿಸಿದನು. ಈತನು ಮಹಾಪುರುಷನಾಗುವನೆಂಬುದನ್ನು ಅರಿತುಕೊಂಡು, ಇಂಥವರನ್ನು ತನ್ನಲ್ಲಿ ಸಂಪಾದಿಸಿಕೊಂಡಿರುವದು ಅಗತ್ಯವೆಂದು ಭಾವಿಸಿದನು. ಕೂಡಲೆ ಸಮ್ಮುಖದ ಕರಣಿಕನ ಕೆಲಸವನ್ನು ಕೊಟ್ಟನು. ಮಾವನ ಆಸ್ತಿಯನ್ನು ಆಶ್ರಯಿಸದೆ ಸ್ವಾವಲಂಬನದಿಂದ ಜೀವಿಸುವ ನಿಶ್ಚಯಮಾಡಿದ ಬಸವೇಶನು ಕಾಯಕವಾಗಿ ಅದನ್ನು ಸ್ವೀಕರಿಸಿದನು. ಅಲ್ಲಿಂದ ಅವನ ಇಹ-ಪರ ಜತೆಗೂಡಿದ ಜೀವನ ಆರಂಭವಾಯಿತು.

ಬಸವೇಶನ ಮನೆಯ ಬಳಗದಲ್ಲೀಗ ಚೆನ್ನಬಸವಣ್ಣನ ಅಧ್ಯಯನದ ವಿಚಾರ ನಡೆದಿದೆ. ಬಲದೇವ ಮಂತ್ರಿಗೆ, ಮಗಳ ಹೊಸ ಸಂಸಾರದಲ್ಲಿ ನಾಗಮ್ಮನ ಸಹಾಯ ಅವಶ್ಯವೆನಿಸಿದ್ದರಿಂದ ಆ ತಾಯಿಮಕ್ಕಳನ್ನು ಮರಳಿ ಸಂಗಮಕ್ಕೆ ಕಳಿಸುವ ಮನಸ್ಸಿರಲಿಲ್ಲ. ಚೆನ್ನಬಸವಣ್ಣನ ಅಧ್ಯಯನದಲ್ಲಿ ಬಸವಣ್ಣನು ವೇಳೆ ಕಳೆಯದೆ, ರಾಜ್ಯಾಡಳಿತದಲ್ಲಿ ಮನಸ್ಸಿಟ್ಟು ಉನ್ನತಾಧಿಕಾರ ಹೊಂದಲೆಂಬುದೂ ಬಲದೇವನ ಬಯಕೆ! ಅದರಿಂದ ಅವನು, ತನ್ನಿಂದ ರಾಜಧನ ಪಡೆಯುತ್ತಿದ್ದ ಬಳ್ಳಿಗಾಂವಿಯ ವಿದ್ಯಾಪೀಠಕ್ಕೆ ಚೆನ್ನಬಸವನನ್ನು ಕಳಿಸಬೇಕೆಂಬ ತನ್ನ ನಿಶ್ಚಿತ ಅಭಿಪ್ರಾಯವನ್ನು ಮುಂದಿಟ್ಟನು. ನಾಗಕ್ಕನ ತಂದೆ ಮಾದಿರಾಜನಿಗೆ ಇದು ಸರಿಯೆನಿಸಿತು. ಇಷ್ಟು ಚಿಕ್ಕವನನ್ನು ದೂರ ಕಳಿಸಲು ಬಸವೇಶ ಆಕ್ಷೇಪಿಸಿದನು. ಆದರೆ ಮಹಾಮಂತ್ರಿ "ನಾನು ಕುಲಪತಿ ವಿದ್ಯಾಭರಣರಿಗೆ ಪತ್ರ ಬರೆದು ಕಳಿಸುವೆನು. ಅವರೂ ಜಾತವೇದಮುನಿಗಳಂತೆ ಚೆನ್ನಬಸವಣ್ಣನನ್ನು ನೋಡಿಕೊಳ್ಳುವರು" ಎಂದು ಹೇಳಿ ಅಳಿಯನನ್ನು ಒಪ್ಪಿಸಿದನು. ನಾಗಮ್ಮನಿಗೆ ಮಗನ ಅಧ್ಯಯನದ ಹೊರತು ಸ್ವಂತ ಸಂಸಾರವೆಂಬುದೇ ಇರಲಿಲ್ಲ. ಪತಿಶಿವದೇವ ಸ್ಥಿರಸನ್ಯಾಸವನ್ನು ಸ್ವೀಕರಿಸಿ ಹೋಗಿಬಿಟ್ಟಿದ್ದನು. ಬಸವಣ್ಣನನ್ನು ಬಿಟ್ಟು [illegible] ಅವನ

ಭವ್ಯ ಭವಿಷ್ಯತ್ತಿನ ದಿವ್ಯ ಜೀವನದಿಂದ ತನ್ನ ಆತ್ಮವನ್ನು ಬೇರ್ಪಡಿಸುವದು ಸಾಧ್ಯವಿರಲಿಲ್ಲ. ಆದ್ದರಿಂದ ಮಗನನ್ನು ಒಳ್ಳೇಗಾಂವಿಗೆ ಕಳಿಸುವ, ಬಲದೇವ ಮಾವನ ಸೂಚನೆಯನ್ನು ಅನುಮೋದಿಸಿದಳು.

ಮಾದಿರಾಜನು, ಬಾಗೇವಾಡಿಯಿಂದ ಭಟರೊಡನೆ ಚೆನ್ನಬಸವನನ್ನು ಒಳ್ಳೇಗಾಂವಿಗೆ ಕಳಿಸುವೆನೆಂದೂ, ನಾಗಕ್ಕ ಮರಳಿ ಕಲ್ಯಾಣಕ್ಕೆ ಬರುವಳೆಂದೂ ಹೇಳಿ ಅವರಿಬ್ಬರನ್ನು ಕರಕೊಂಡು ಬಾಗೇವಾಡಿಗೆ ಬಂದನು.

ಹತ್ತು ವರ್ಷದ ಚೆನ್ನಬಸವಣ್ಣನು ಬಾಗೇವಾಡಿಯಿಂದ ಒಳ್ಳೇಗಾಂವಿಗೆ ಪ್ರಯಾಣಮಾಡುತ್ತಿದ್ದನು. ಸಂಗಡ ನಾಲ್ವರು ಅಶ್ವಭಟರು ಅವನನ್ನು ರಕ್ಷಿಸಿ ಕಳಿಸಿ ಬರಲು ಮಾದಿರಾಜನಿಂದ ಆಜ್ಞಾಪ್ತರಾಗಿ ಹೊರಟಿದ್ದರು. ನಾಲ್ಕನೆಯ ದಿವಸ ಅವರು ಕಪೋತಗಿರಿಯ ಪಶ್ಚಿಮದಡಿಯ ಮಾರ್ಗದಲ್ಲಿ ಸಾಗಿದ್ದರು. ಹತ್ತು ಗಳಿಗೆಯಷ್ಟು ಹೊತ್ತು ಏರಿತ್ತು. ಇನ್ನು ನೀರು ನೆಳಲುಗಳುಳ್ಳ ಒಳ್ಳೆಯ ಸ್ಥಳ ನೋಡಿ ಮಧ್ಯಾಹ್ನದ ಅಡಿಗೆ ಊಟಗಳಿಗಾಗಿ ಇಳಿಯಬೇಕು. ಮಾರ್ಗದ ಒಂದು ದಿನ್ನೆಯನ್ನೇರಿ ಇಳುಕಲಿಗೆ ನಡೆದಾಗ ಮುಂದೊಂದು ಹಳ್ಳಿ ಕಾಣಿಸಿತು. ಅದರಾಚೆಗೆ ಗುಡ್ಡದ ಕಂದರದಿಂದ ಬಂದ ಹಳ್ಳವೂ ನಿಬಿಡವಾದ ಗಿಡಮರಗಳೂ ಕಂಡವು. ಅಲ್ಲಿ ಮಧ್ಯಾಹ್ನದ ಬೀಡಿಗೆ ಸೊಗಸಾದೆಡೆ ಇರಬಹುದೆಂದು ಭಟನಾಯಕ ಎಣಿಕೆ ಹಾಕಿದನು. ಹಳ್ಳಿಯ ಸಮೀಪಕ್ಕೆ ಬಂದಂತೆ ಊರಲ್ಲಿ ವಾದ್ಯಗಳ ಸಪ್ಪಳವೂ ಹೂಂಕಾರ ಚೀಂಕಾರಗಳ ವಿಕೃತ ಕೇಕೆ ಗಳೂ ಕೇಳಿಬರಹತ್ತಿದವು. ಏನಾದರೂ ಇರಲಿ ನಾವು ದಾಟಿ ಹೋದ ರಾಯಿತು ಎಂದು ನಡೆದಿದ್ದರು. ತೀರ ಹತ್ತಿರಕ್ಕೆ ಬಂದಾಗ ಮಾರ್ಗದ ಬಲಗಡೆಗಿರುವ ಊರೊಳಗಿಂದ ಎಡಗಡೆಯ ಕೇರಿಯ ಮರಗಮ್ಮನ ಗುಡಿಗೆ ಹೊರಟಿದ್ದ ಮೂಢ ಮೆರವಣಿಗೆಯೊಂದು ನಮ್ಮ ಪ್ರವಾಸಿಕರ ದಾರಿಗೆ ಅಡ್ಡಲಾಗಿ ಬಂದಿತು. ಅದು ಪಾದು ಹೋಗಲೆಂದು ಕುದುರೆಗಳ ಕಡಿವಾಣ ಜಗ್ಗಿ ನಿಲ್ಲಿಸಿದರು.

ಮೆರವಣಿಗೆಯ ಮುಂದೆ ರಣಹಲಿಗೆಗಳು ಅಬ್ಬರಿಸಿ ಬಡಿದುಕೊಳ್ಳುತ್ತಿದ್ದವು. ತಲೆಗೂದಲ ತೂರಿಸಿ-ಹಾರಿಸಿ, ಆರ್ಭಕೊಗುತ್ತ, ಅರಿಷಿಣ-ಕುಂಕುಮಗಳ ಹುಡಿಯಲ್ಲಿ ಮುಳುಗಿದ ಮುಖದ, ಕೆಂಪುಉಡಿಗೆಯ, ಗೆಜ್ಜೆಗಾಲಿನ ಪೋತರುಗಳು ಲಡ್ಡು ಹೊಡೆದುಕೊಂಡು ಕುಣಿಯುತ್ತಿದ್ದರು. ಅವರ ಹಿಂದೆ ಸುಣ್ಣದ ಪಟ್ಟೆ ಬೇವಿನ ಸೊಪ್ಪುಗಳಿಂದ ಅಲಂಕೃತವಾದ ಎಳೆ ಹರೆಯದ ಕೋಣ! ಅದನ್ನು ಮುಂದಿಬ್ಬರು ಹಿಂದಿಬ್ಬರು ನಾಲ್ಕು ಹಗ್ಗಗಳಿಂದ ಬಂಧಿಸಿ ಹಿಡಿದಿದ್ದಾರೆ. ಅದರ ಎಡಕಬದಲ್ಲಿ ಚೊಟ್ಟ ಪೂಜಾರನನ್ನು ಮುಖಕೆ

ಬಳಿದುಕೊಂಡಿರುವ, ಕೋರೆ ಮೀಸೆಯ, ಬಿಟ್ಟಜಡೆಯ ತುಂಡು ರಕ್ಕಸರಂತಹರಿಬ್ಬರು ಹೊಳೆಯುವ ಖಂಡೆಯಗಳನ್ನು ಕೈಯಲ್ಲಿ ಹಿಡಿದು ನಡೆದಿದ್ದಾರೆ. ಚಪ್ಪುಗೊಡಲೆಯ ಬಿಚ್ಚುಗತ್ತಿಯ ಹತ್ತುಯುವಕರು ಹಿಂದೆ ಇದ್ದಾರೆ, ಬಳಿಕ ಉಪ್ಪು ಮೂಗುತಿಯ ನಗೆ ಮೊಗದ ಹಲವಾರು ಮಹಿಳೆಯರು ಆರತಿ ಹಿಡಿದು ಬರುತ್ತಿದ್ದಾರೆ. ಕೊನೆಯಲ್ಲಿ ಗ್ರಾಮಣಿಯನ್ನು ನಡುವಿಟ್ಟುಕೊಂಡು ಹತ್ತೆಂಟು ಹಿರಿಯರು, ತಾವೊಂದು ಮಹಾಕಾರ್ಯ ಮಾಡುತ್ತಿರುವ ಆಢ್ಯತೆಯಿಂದ ಹೊರಟಿದ್ದಾರೆ. ಬೇರೆ ನೂರಾರು ಮಂದಿ ಕೂಗುತ್ತಾರೆ, ಕುಣಿಯುತ್ತಾರೆ.

ಇದೆಲ್ಲ ಏನು ಎಂದು ನೋಡುತ್ತಿದ್ದ ಚೆನ್ನಬಸವಣ್ಣ! ಸಂಗಮದ ಪವಿತ್ರವಾತಾವರಣದಲ್ಲಿ ಹುಟ್ಟಿ ಆಡಿ ಬೆಳೆದವ, ಕಲ್ಯಾಣದಲ್ಲಿ ಸ್ವಲ್ಪಕಾಲ. ಬಾಗೇವಾಡಿಯಲ್ಲಿ ಸ್ವಲ್ಪಕಾಲ ಮಹಾಜನರ ಮಧ್ಯದಲ್ಲಿ ಇದ್ದು ಬಂದವ, ಇಂಥ ಮೂಢ ಅಟ್ಟಹಾಸಗಳನ್ನು ನೋಡಿದವನೇ ಅಲ್ಲ. ಕುತೂಹಲ ಕೆರಳಿ ನಿಂತಿತು. 'ಇದು ಏನು ? ಕೋಣವನ್ನೇಕೆ ಹಿಡಿದೊಯ್ಯುತ್ತಿದ್ದಾರೆ ?' ಎಂದು ಹತ್ತಿರದ ಅಶ್ವಭಟನನ್ನು ಕೇಳಿದನು. ಆತನು ನಸುನಕ್ಕು ಹೇಳಿದನು: " ಅಲ್ಲಿ ನೋಡಿರಿ, ಆ ಗುಡಿಯ ಮುಂದೆ ಹಂದರ ಹಾಕಿದ್ದಾರಲ್ಲ, ಅಲ್ಲಿ ದೇವಿಗೆ ಕೋಣನ ಬಲಿ ಕೊಡಲು ಒಯ್ಯುತ್ತಿದ್ದಾರೆ. "

" ಅಂದರೆ ?"

" ಅಂದರೆ ಕೋಣವನ್ನು ಕಡಿದು ಕೊಂದು ಅದರ ಅಡಗವನ್ನು ದೇವಿಗೆ ನೈವೇದ್ಯ ಮಾಡುತ್ತಾರೆ. "

" ಅದನ್ನು ದೇವಿ ಬೇಡಿದ್ದಾಳೆಯೇ ? "

" ಅದೇನೋ ಒಡೆಯ? ಅವರು ಹರಕೆ ಹೊತ್ತಿರುತ್ತಾರೆ. ಹಿಂದೆ ಬರುವ ಅವ್ವಗಳನ್ನು ಹಿರಿಯರನ್ನು ನೋಡಿರಿ. ತಾವು ದೇವಿಯ ಹರಕೆ ಸಲ್ಲಿಸುತ್ತಿದ್ದೇವೆಂಬ ಹಿಗ್ಗು ಅವರ ಮೊಗದ ಮೇಲೆ ತಾನೇ ತಾನಾಗಿ ಮಿನುಗುತ್ತಿದೆ."

" ಇದು ಮೂರ್ಖತನ ; ಇದನ್ನು ಕೊಲ್ಲಬಾರದು,ಕೊಲ್ಲಗೊಡಬಾರದು" ಎನ್ನುತ್ತ ಆ ಕ್ಷಣ ಚೆನ್ನಬಸವಣ್ಣ ಕುದುರೆಯಿಂದ ಕೆಳಗೆ ಜಿಗಿದು ಜನಜಂಗುಳಿಯಲ್ಲಿ ಕೋಣನತ್ತ ಓಡಿದನು. ಅದನ್ನು ಕಂಡ ಭಟನಾಯಕನು ಹಾರಿಹೋಗಿ ಅವನನ್ನು ಹಿಂದಕ್ಕೆ ಎಳೆದುಕೊಂಡನು

" ಬಿಡು ನಂದ ಕಕ್ಕ ! ಇವರಿಗೆ ತಾವು ತಪ್ಪು ಮಾಡುತ್ತೇವೆಂಬುದು ಗೊತ್ತಿಲ್ಲ, ತಿಳಿಸಿ ಹೇಳಬೇಕು."

" ಹೇಳಿದರೆ ಕೇಳುವ ಸ್ಥಿತಿಯಲ್ಲಿಲ್ಲ; ಕೇಳುವದಿಲ್ಲ. ಒಡೆಯ "

" ಕೇಳುವದಿಲ್ಲಾ ? ಆಂ " ಚೆನ್ನಬಸವಣ್ಣನ ಅಳವಿಗೆ ಮೀರಿದ ಕಳವಳ ಹೃದಯುಕ್ಕಿಳಿಯಿತು. ಸಂಕಟದಿಂದ ತಲೆ ಸುತ್ತಿ ಮೂರ್ಛೆ ಬಂದಿತು. ಕೆಳಗೆ ಕುಸಿದನು ಮತ್ತಿಬ್ಬರು ಭಟರು ಬಂದು ಎತ್ತಿಕೊಂಡು ಹಿಂದೆ ಸರಿದರು. ಇದನ್ನು ನೋಡಿ ಬಾರಿಸುವದನ್ನು ನಿಲ್ಲಿಸಿ, ಶಸ್ತ್ರಧಾರಿಗಳು ಸಹಿತ ಆ ಜನರೆಲ್ಲ ಈ ಕಡೆಗೆ ಮುಖ ಮಾಡಿ ನಿಂತರು. ಭಟನಾಯಕ ನಂದಣ್ಣನು ನಿಮ್ಮ ಪಾಡಿಗೆ ನೀವು ಹೋಗಿರಿ ಬೇಗ ' ಎಂದು ಗದರಿ ನುಡಿದನು. ಮೆರವಣಿಗೆ ಹೋಯಿತು.

ಹಿಂದೆ ಒಂದು ಗಿಡದ ನೆರಳಿನ ಕಟ್ಟೆಯ ಮೇಲೆ ಚೆನ್ನಬಸವಣ್ಣನನ್ನು ಮಲಗಿಸಿ ಗಾಳಿ ಹಾಕಿದ ಮೇಲೆ ಚೇತರಿಸಿ ಕಣ್ತೆರೆದನು. ಮೈ ಬೆವತಿತ್ತು. ಅವನನ್ನು ದಕ್ಷತೆಯಿಂದ ಕುದುರೆಯ ಮೇಲೆ ಕೂಡ್ರಿಸಿಕೊಂಡು, ಮರಗಮ್ಮನ ಗುಡಿಯು ಕಾಣದಂತೆ ಅತ್ತತ್ತ ದೂರ ಹಾಯ್ದು ಊರ ದಾಟಿ ಮಾರ್ಗ ಕೂಡಿದರು. ಮುಂದೆ ಮತ್ತೊಂದು ಹರದಾರಿ ಹೋದ ಮೇಲೆಯೇ ಯೋಗ್ಯವಾದ ಸ್ಥಳ ನೋಡಿ ಮಧ್ಯಾಹ್ನದ ಬೀಡಾರ ಮಾಡಿದರು. ಅಂದಿನ ದಿನವೆಲ್ಲ ಚೆನ್ನಬಸವಣ್ಣ ಸುಂದಾಗಿ ಸಪ್ಪಗಾಗಿಯೇ ಇದ್ದನು. ಮನದಲ್ಲಿ ತುಮುಲವೊಂದು ನಡೆದೇ ಇತ್ತು. ಕಳವಳದ ಕೊರೆತವಿದ್ದೇ ಇತ್ತು.

ಮರುದಿನ ನಡೆದು ಮೂರನೆಯದಿನ ಒಳ್ಳೆಯ ಫಲವತ್ತಾದ ಬಯಲು ಪ್ರದೇಶಕ್ಕೆ ಬಂದಿದ್ದರು. ಗ್ರಾಮಗಳು ಸಂಪದ್ಭರಿತವಾಗಿದ್ದವು. ಧರ್ಮಾಚಾರದ ಕೇಂದ್ರಗಳೆನಿಸಿದ ಕಾಳಾಮುಖ ಶೈವ ಮಠಗಳೂ ಶಿವಾಲಯಗಳೂ ಅಲ್ಲಲ್ಲಿಗಿದ್ದವು. ಚಾಲುಕ್ಯಚಕ್ರವರ್ತಿ ಸರ್ವಜ್ಞ ಸೋಮೇಶ್ವರ (ಕ್ರಿ. ಶ. ೧೧೨೬-೩೮) ನು ಈ ಶೈವಶಾಖೆಗಳಿಗೆ ವಿಶೇಷವಾಗಿ ಆಶ್ರಯ ನೀಡಿದ್ದನು. ಸಾಮ್ರಾಜ್ಯದಲ್ಲಿ ಹಲವು ಭವ್ಯವಾದ ಶಿವದೇವಾಲಯಗಳನ್ನು ನಿರ್ಮಿಸಿ, ಅವುಗಳ ಸೇವೆಗೆ, ವಿದ್ಯಾದಾನಕ್ಕೆ. ಪ್ರವಾಸಿಕರ ಸೌಕರ್ಯಕ್ಕೆ ಸಾಕಷ್ಟು ಉಂಬಳಿ ಹಾಕಿಕೊಟ್ಟಿದ್ದನು. ಆದರೆ ಅವುಗಳ ಆಡಳಿತ ಸ್ವಾರ್ಥಿಗಳ ಕೈಸೇರಿತು. ಅವರ ರೀತಿನೀತಿಗಳು ಕಲುಷಿತವಾಗಿದ್ದವು. ಅವುಗಳ ಪ್ರಯೋಜನಗಳು ಕೆಲವೊಂದು ವರ್ಗದವರಿಗೆ ಮಾತ್ರ ಕಾಯ್ದಿರಿಸಿದಂತಿದ್ದವು. ಈ ಸ್ವಾರ್ಥಿಗಳು ಸಾಮಾನ್ಯರಲ್ಲಿ ದೀನರಲ್ಲಿ ಅಂಧಶ್ರದ್ಧೆಯನ್ನು ಮೂಢನಂಬಿಕೆಗಳನ್ನು ಮಾತ್ರ ಹೆಚ್ಚಿಸಿ ಮತ್ತಿಷ್ಟು ಸುಲಿಗೆ ನಡಿಸಿದರು. ಸಮಾಜದ ಧಾರ್ಮಿಕ ಪುರೋಗಾಮಿಗಳೆನಿಸಿ ತಾವು ಮಾತ್ರ ಕೊಬ್ಬಿದರು. ಕೀಳುವರ್ಗದವರೆನಿಸುವವರು ಉಪಚಾರವಿಲ್ಲದೆ ಮೈ ಮೆತ್ತಗಾಗುವಷ್ಟು ಈ ಪುರೋಗಾಮಿಗಳ ಬಿಟ್ಟಿಯಲ್ಲಿ ದುಡಿಯಬೇಕಾಗುತ್ತಿತ್ತು. ಇದೆಲ್ಲವನ್ನು

ನೋಡಿ ಸೂಕ್ಷ್ಮದಲ್ಲಿ ಅರಿತುಕೊಳ್ಳಲು ಚೆನ್ನಬಸವಣ್ಣನಿಗೆ ಈ ಪ್ರವಾಸವು ತುಂಬ ಅನುಕೂಲವಾಯಿತು. ಧರ್ಮದ ಹೆಸರಿನಲ್ಲಿ ಚೆನ್ನಬಸವಣ್ಣ ಕಂಡ ಅನೀತಿ ಅನ್ಯಾಯಗಳ ನಿದರ್ಶನಗಳಲ್ಲಿ ಇನ್ನೊಂದನ್ನು ಇಲ್ಲಿ ವಿವರಿಸಬೇಕೆನಿಸುತ್ತಿದೆ.

ಒಂದು ದೊಡ್ಡ ಶಿವದೇವಾಲಯದ ಪ್ರಾಂಗಣದಲ್ಲಿ ಪೌಳಿಯ ತಂಗುಮನೆಗೆ ಬಾಗೇವಾಡಿಯ ನಮ್ಮ ಪ್ರವಾಸಿಕರು ಬಂದಿಳಿದರು. ಹೊತ್ತು ಏಳೆಂಟು ಗಳಿಗೆಯಾಗಿತ್ತು. ಬೆಳಗಿನ ರಾತ್ರಿಯಲ್ಲಿಯೇ ಮಾರ್ಗಕ್ರಮಣ ಕೈಕೊಂಡಿದ್ದರಿಂದ ಬೇಗನೆ ವಿಶ್ರಾಂತಿಗೆ ಬಂದಿದ್ದರು. ಭಟರು ಸಾಮಾನು ಇಳಿಸುತ್ತಿದ್ದಂತೆಯೇ ಚೆನ್ನಬಸವಣ್ಣ ಅಲ್ಲಿಯ ಪರಿಸರವನ್ನು ಈಕ್ಷಿಸುತ್ತಿದ್ದನು.

ನಿಮ್ನವರ್ಗದ ಮಹಿಳೆಯೊಬ್ಬಳು ನರಳುವ ಮಗುವನ್ನು ಎದೆಗವಚಿಕೊಂಡು ಅರ್ಚಕನ ಮುಂದೆ ನಿಂತು ಅಂಗಲಾಚಿ ಬೇಡಿಕೊಳ್ಳುತ್ತಿದ್ದಳು:

"ದೇವರ ಅಂಗಾರ ತೀರ್ಥ ಹಾಕುತ ಹೇಳ್ಯಾರೀ ಎಪ್ಪಾ! ಎರಡು ದಿನ ಆಯ್ತು ಮಗ ಎಚ್ಚರಿಲ್ಲ"

"ಅಂಗಾರದಿಂದೇನಾಗುವದಿಲ್ಲ ; ಕೈಕಾಲು ಸೆಟಸಿ ಪುಟಿಸುವದೆಂದು ಹೇಳುತ್ತೀ. ಅದಕ್ಕೆ ತ್ರಿಶೂಲರಕ್ಷೆ ಕಟ್ಟಬೇಕು. ಅದು ಬೇಕಾದರೆ ಒಂದು ವರಹ ತೆರಬೇಕಾಗುತ್ತದೆ."

"ಅಷ್ಟೆಲ್ಲಿಂದ ತರಬೇಕೆಪ್ಪಾ ನಾನು ?"

"ತರದಿದ್ದರೆ ಬಿಡು ಹೋಗು. ಈ ಮಂಟಪದ ಕಟ್ಟೆಯಮೆಟ್ಟಿಲವರೆಗೆ ಬರಬಾರದು ನೀನು! ಅಲ್ಲಿ ಅಂಗಳದ ನಡುವೆ ನಿಂತು ಕೇಳಬೇಕು ನಡೆ."

ವಿಭೂತಿಪಟ್ಟೆ ಗಂಧದ ಮುದ್ರೆಗಳ ಪೂಜಾರಿ ಗದರಿಸಿ ನುಡಿದನು. ಆ ತಾಯಿ ಮರಳಿದಳು. ಕಣ್ಣೀರು ಕಪಾಳಕ್ಕೆ ಬಂದಿದ್ದವು ಅದೇ ಹೊತ್ತಿನಲ್ಲಿ ಆಕೆಯ ಐದು ವರ್ಷದ ಮಗುವೊಂದು ಆವಾರದಲ್ಲಿ ಗುಡಿಯ ಬಲಗಡೆಯ ಸಂದಿಯಲ್ಲಿರುವ ಒಂದು ಕೋಣೆಯಲ್ಲಿ ಇಣಕಿ ನೋಡಿತ್ತು. ಅದು ಪಾಠಶಾಲೆ. ಆ ಅಂತ್ಯಜ ಬಾಲಕನನ್ನು ಓಡಿಸಲು ಒಳಗಿನಿಂದ ಒಬ್ಬನು ಒಂದು ಕೋಲನ್ನೇ ಎತ್ತಿಕೊಂಡು ಬಂದಿದ್ದನು. ಚೀರುತ್ತ ಓಡಿ ಬಂದ ಮಗು ತಾಯಿಯ ಸೆರಗ ಹಿಡಿದುಕೊಂಡಿತು. ಇಬ್ಬರೂ ಹೆಬ್ಬಾಗಿಲ ದಾಟಿ ಹೋದರು. ಇದನ್ನು ಗಮನಿಸಿದ ಚೆನ್ನಬಸವಣ್ಣ: "ಇದೇನು ಶಿವಾಲಯವೋ ಪಿಶಾಚನಿಲಯವೋ ? ಶಿವಸಾನ್ನಿಧ್ಯವಿದೆಯೇ ಈ ಶಿವಲಿಂಗದಲ್ಲಿ? ಇಷ್ಟು ಕ್ರೂರವೇ ವರ್ಣವ್ಯವಸ್ಥೆ ? ಶಾಸ್ತ್ರಗಳಲ್ಲಿ ದಯೆಗೆ ಸ್ಥಾನವಿಲ್ಲವೇ ?" ಎಂದು

ದಂಗುಬಡಿದು ನಿಂತಿದ್ದನು. ಇಷ್ಟಕ್ಕೆ ಮುಗಿಯಲಿಲ್ಲ ಅಲ್ಲಿಯ ಅನುಭವ!

ಭಟನಾಯಕನು ಕೋಣೆಯಲ್ಲಿ ಹಾಸಿ ಚೆನ್ನಬಸವಣ್ಣನನ್ನು ಕೂಡ್ರಿಸಿ, ಉಳಿದ ಮೂವರಿಗೆ ಕುದುರೆಗಳನ್ನು ಹೊಳೆಯ ಕಡೆಗೆ ಒಯ್ಯಲು ಹೇಳಿ ತಾನು ಅಂಗಡಿಗಳ ಕಡೆಗೆ ಹೋದನು. ಚೆನ್ನಬಸವಣ್ಣ ಕೋಣೆಯಲ್ಲಿದ್ದರೂ ಕಾತರದಿಂದ ಹೊರಗೆ ನೋಡುತ್ತಿದ್ದನು.

ಅರ್ಚಕನು ಯುವಕನು. ಅವನು ದೇವಾಲಯದ ಸಂಸ್ಥಾಪಕ ಪೂಜಾರಿಯ ಮಗನು. ತಂದೆಯ ವೈಶಿಷ್ಟ್ಯಗುಣಗಳು ಇವನಲ್ಲಿ ಇರಲಿಲ್ಲ. ಆ ಹೊಲೆಯರ ಹೆಣ್ಣುಮಗಳನ್ನು ಬೆದರಿಸಿ ಕಳಿಸಿದ ಬಳಿಕ ಆತನು ಹೆಬ್ಬಾಗಿಲಿಗೆ ಬಂದು ಬಂದು ನಿಂತು ಎಡಗಡೆಯ ದಾರಿಯ ಕಡೆಗೆ ನೋಡಿ ಒಳಗೆ ಹೋಗುತ್ತಿದ್ದನು. ಹೀಗೆ ಎರಡಾವರ್ತಿಯಾಗಿತ್ತು. ಅಷ್ಟರಲ್ಲಿ, ಬಿಳಿಯ ಹೂವಿನ ಹಸಿರು ಸೀರೆಯನ್ನುಟ್ಟು, ನೀಲೀವರ್ಣದ ರವಕೆ ತೊಟ್ಟ ಒಯ್ಯಾರದ ಯುವತಿಯೊಬ್ಬಳು ಬಂದಳು. ಕಾಲಗೆಜ್ಜೆಗಳ ಮಂಜುಳಧ್ವನಿ ಕಿವಿದೆರೆಗೆ ಬಂದೊಡನೆ, ಅರ್ಚಕನು ಹೊರಳಿ ನೋಡಿ, ಅರಳಿದ ಮೊಗದಿಂದ ಕಟ್ಟೆಯಿಳಿದು ಅವಳನ್ನು ಎದುರುಗೊಂಡನು.

"ಯಾವಾಗ ಕಲಾ ದೇವರಿಗೆ ನಿನ್ನ ನೃತ್ಯಸೇವೆ ಸಲ್ಲುವದು? "

"ಅದೇನು ಈಗಲೇ!" ಎಂದು ಆಕೆ ಚಂಗನೆ ಪುಟನೆಗೆದು ಹೆಜ್ಜೆ ಇಟ್ಟು ನೃತ್ಯಭಂಗಿಯಲ್ಲಿ ನಿಂತುಬಿಟ್ಟಳು. ಒಳ್ಳೆಯ ಉಲ್ಲಾಸ ಆ ಪೂಜಾರಿಗೆ! 'ನಾನೆಲ್ಲೆ ದೇವರು' ಎನ್ನುತ್ತ ತನ್ನ ಕರಾಂಗುಲಿಯ ಕೊನೆಯಿಂದ ಅವಳ ಕೆನ್ನೆಯನ್ನು ಮೃದುವಾಗಿ ತಟ್ಟಿ 'ಬಾ' ಎಂದು ರಂಗಮಂಟಪದ ಕಟ್ಟೆಯನ್ನೇರಿ ನಡೆದನು.

'ನಿನ್ನ ಬಿಟ್ಟರೆ ದೇವರಿನ್ನೆಲ್ಲಿ?' ಎನ್ನುತ್ತ ಹಿಂಬಾಲಿಸಿದಳಾ ದೇವದಾಸಿ! ಅರ್ಚಕನು ಗರ್ಭಗುಡಿಯ ಬಾಗಿಲವರೆಗೆ ಕರೆದೊಯ್ದು ಒಳಗಿನಿಂದ ಹಣ್ಣು ತೆಂಗು ಮತ್ತಿತರ ಪೊಟ್ಟಣಗಳನ್ನು ತಂದು ಕೊಟ್ಟನು. ಆಕೆ ಟೊಂಕದಿಂದ ತೆಗೆದ ಬಟ್ಟೆಯೊಂದರಲ್ಲಿ ಅವನ್ನೆಲ್ಲ ಕಟ್ಟಿಕೊಂಡು ಮದ್ದಾನೆಯಂತೆ ಹೆಬ್ಬಾಗಿಲತ್ತ ನಡೆದಳು. ದೀಪಕ್ಕೆ ಎಣ್ಣೆ ಸುರಿದು ಅವಸರದಿಂದ ಬಾಗಿಲ ಹಾಕಿ ಪೂಜಾರಿಯೂ ಹಿಂದೆ ನಡೆದನು. ಆಗ ಅವನ ಮಗನು ಓಡಿ ಬಂದು 'ಅಪ್ಪಾ ನಿನ್ನೆ ಬಂದಿದ್ದರಲ್ಲಾ, ಅವರು ದೇವರ ನೈವೇದ್ಯಕ್ಕೆ ಐದು ವರಹಕೊಡಲು ಒಪ್ಪಿದ್ದಾರಂತೆ. ಅಮ್ಮ ಪೇಟೆಯಿಂದ ಸಾಮಾನು ತರಲು ಹೇಳಿದ್ದಾಳೆ' ಎಂದು ತೇಗುತ್ತ ಉಸಿರಿದನು.

"ಸಾಮಾನೆಲ್ಲಾ ಮನೆಯಲ್ಲಿದೆ ನಡಿಯೋ! ಅದಕೆಷ್ಟು ಬೇಕು?

ಅಂತು ಹೋಗಿಬಿಟ್ಟರು ಹೊರಗೆ.

ಲೋಕದಾಟ ನೋಡುತ್ತಿದ್ದ ಚೆನ್ನಬಸವಣ್ಣನ ಒಳಗಣ್ಣು ಇದನ್ನೆಲ್ಲ ಕಂಡರಿಯಿತು. ಹೊಟ್ಟೆ ಕಿವುಚಿದಂತಾಯಿತು. 'ಧರ್ಮರಕ್ಷಣೆಗೆ ರಾಜಾಶ್ರಯ ಪಡೆದ ಸಂಸ್ಥೆಗಳ ಕಾರ್ಯವಿಧಾನವೇ ಇದು? ಧರ್ಮವೆತ್ತ? ತತ್ವವೆತ್ತ? ನಡೆವಳಿಯೆತ್ತ? ಶಿವ ಶಿವಾ' ಎಂದು ಮರುಗಿದನು. ಒಂದೊಂದು ಕಡೆ ಒಂದೊಂದು ಬಗೆಯ ಅಸಹನೀಯವಾದ ಅವ್ಯಾಪಾರ! ಹೀಗಾದರೆ ಧರ್ಮದ ಗತಿಯೇನು? ಜನರ ಉದ್ಧಾರದ ಬಗೆಯೇನು? ಬನವಾಸಿ ಬಳ್ಳೀಗಾಂವಿಗಳ ದೇವಸ್ಥಾನಗಳೂ ಹೀಗೆಯೇ ಏನು ಮತ್ತೆ? ಬಳ್ಳೀಗಾಂವಿ ಹೀಗಿರಲಿಕ್ಕಿಲ್ಲ! ಅಲ್ಲಿ ವಿದ್ಯಾಪೀಠವಿದೆ. ಪಂಡಿತರು ತತ್ತ್ವಜ್ಞಾನಿಗಳು ವಾಸಮಾಡಿದ್ದಾರೆ. ಸಂಗಮದಂತೆ ಅಲ್ಲಿಯೂ ಧರ್ಮಾಚಾರದಲ್ಲಿಯ ದೋಷಗಳಿಗೆ ಪರಿಹಾರ ಕಾಣುವ ಪ್ರಯತ್ನವೂ ನಡೆಯುತ್ತಿರಬಹುದು' ಎಂದು ಅಸಮಾಧಾನದಲ್ಲಿಯೇ ಸಮಾಧಾನ ತಾಳಿದನು. ವಿಶ್ರಾಂತಿಯ ನಂತರ ಪ್ರಯಾಣ ಮುಂದುವರಿಯಿತು.

ಚಾಲುಕ್ಯ ಮಹಾಮಂತ್ರಿಗಳ ಅಪೇಕ್ಷೆಯಂತೆ ವಿದ್ಯಾಭರಣ ಪಂಡಿತರು ಚೆನ್ನಬಸವಣ್ಣನ ಲಾಲನೆ ಪಾಲನೆ ಅಧ್ಯಯನಗಳ ವ್ಯವಸ್ಥೆ ನೋಡಿಕೊಂಡರು. ಚೆನ್ನಬಸವಣ್ಣನ ತೀಕ್ಷ್ಣಬುದ್ಧಿ, ವ್ಯಾಪಕವಿಚಾರ, ನಿಷ್ಠೆ, ಸದಾಚಾರ ಸಾದಾತನ. ಅಧ್ಯಯನದಲ್ಲಿ ಪರಮಾಸಕ್ತಿ ಇವು ವಿದ್ಯಾಭರಣರ ಮೆಚ್ಚುಗೆ ಪಡೆದು ಅವನು ಅವರ ಆಪ್ತ ಶಿಷ್ಯನೇ ಆಗಲಿಕ್ಕೆ ಬಹಳ ದಿನ ಹಿಡಿಯಲಿಲ್ಲ. ತರಳತನದಲ್ಲಿಯೇ ತಾರಕಾಸುರನ ಸಂಹಾರಕ್ಕೆ ತಕ್ಕ ಶಕ್ತಿಯನ್ನು ಸಂಪಾದಿಸಿದ ಷಣ್ಮುಖನಂತೆ ಚೆನ್ನಬಸವಣ್ಣನು ಎಳೆಯಹರಯದಲ್ಲಿಯೇ ಅಜ್ಞಾನದ ಕಾಳ ಕತ್ತಲೆಯನ್ನು ಕಳೆಯಬಲ್ಲ ಜ್ಞಾನಜ್ಯೋತಿಯಾಗಿ ಬೆಳಗಿದನು. ಬಳ್ಳೀಗಾಂವಿಯ ಸಾಧಕರ ಗರಡಿಯಲ್ಲಿ ಚೆನ್ನಬಸವಣ್ಣನದೇ ಮೇಲುಗೈ. ಅವನ ಸಾಧನೆಯ ತೀವ್ರಗತಿಯನ್ನು ಪ್ರಗತಿಯನ್ನು ವಿದ್ಯಾಭರಣರು ಪ್ರಶಂಸಿಸಿ ಪತ್ರಬರೆದು ಕಲ್ಯಾಣಕ್ಕೆ ಕಳಿಸುತ್ತಿದ್ದರು. ರಾಜಕಾರ್ಯಕ್ಕಾಗಿ ಬಸವೇಶ ಬನವಾಸಿಯ ಕಡೆಗೆ ಬಂದಾಗ ಬಳ್ಳೀಗಾಂವಿಗೂ ಬಂದು ತಾನು ಕಂಡ ಅಳಿಯನ ಜ್ಞಾನದೇಳಿಗೆಯನ್ನು ಅಕ್ಕನಿಗೆ ವಿವರಿಸಿ ಹೇಳುತ್ತಿದ್ದನು. ಬಲದೇವಮಂತ್ರಿ ಮಾತ್ರ ಇರಲಿಲ್ಲ. ಅಷ್ಟರಲ್ಲಿ ಲಿಂಗೈಕ್ಯನಾಗಿದ್ದನು.

ಚೆನ್ನಬಸವಣ್ಣನ ಓದು ಮತ್ತು ವಿವೇಚನೆಗಳೊಡನೆ ಸಂಸ್ಕೃತ ಭಾಷೆಯ ಜ್ಞಾನವು ತಾನೇ ಮೈಗೂಡಿತು. ಆತನು ವೇದ ಉಪನಿಷತ್ತು ಬ್ರಹ್ಮಸೂತ್ರಗಳನ್ನು ಷಡ್‌ದರ್ಶನಗಳನ್ನು ಅಭ್ಯಸಿಸಿದನು. ಅವುಗಳಲ್ಲಿ ಬೆಳಕು ಹೊಳೆದರೂ ಮತ್ತೆ ಅವನ ಮನಸ್ಸಿಗೆ ಅತೃಪ್ತಿಯು ಮುಸುಕುತ್ತಿತ್ತು. ಮಾನವತೆಗೆ ದ್ರೋಹ ಬಗೆದುದೆಂದು ಮನುಸ್ಮೃತಿಯನ್ನು ಬದಿಗಿಟ್ಟನು. ಸಂಗಮದಲ್ಲಿ ಮಾವನ ಅರಿಕೆಯಲ್ಲಿ

ಅಷ್ಟಷ್ಟು ಸಂಪರ್ಕಪಡೆದಿದ್ದ ಶಿವಾಗಮಗಳನ್ನು ಈಗ ಪೂರ್ಣವಾಗಿ ಅಭ್ಯಸಿಸಿ ಪರಿಶೀಲಿಸಿದನು. ತಾನು ನೋಡುತ್ತಿರುವ, ತಿಳಿದು ಅನುಭವಿಸುತ್ತಿರುವ ಒಳಹೊರಗಿನ, ಸಮ ವಿಷಮ, ಭಿನ್ನ ಅಭಿನ್ನ, ವ್ಯಥೆ ಶಾಂತಿ ಮುಂತಾದ ದ್ವಂದ್ವಗಳನ್ನು ನೀಗುವಮಾರ್ಗ ಅವುಗಳಲ್ಲಿ ಸುಗಮವಾಗಿ ಕಂಡಂತಾದರೂ ಕೊನೆಕೊನೆಗೆ ಪೂರ್ಣಾನಂದದಲ್ಲಿ ಕೆಲವು ಆತಂಕಗಳು ಇವೆಯೆಂದು ಅವನಿಗೆ ಅನಿಸದಿರಲಿಲ್ಲ. ಶಿವಾಗಮಗಳ ಹಿನ್ನೆಲೆಯಲ್ಲಿ ಶೈವಶಾಖೆಗಳ ವಿಶೇಷ ಪರಿಚಯವನ್ನು ಮಾಡಿಕೊಂಡಿದ್ದನು. ತತ್ತ್ವ ಮೀಮಾಂಸಗಳು ಕರಗತವಾಗಿದ್ದವು. ಆದರೂ ಅವನಿಗೆ ತೃಪ್ತಿಯಿಲ್ಲ. ಮನಸ್ಸಿಗೆ ಸಮಾಧಾನವಿಲ್ಲ. ನಿಶ್ಚಲ ಶಾಂತಿಯ ನಿಜಪಥವನ್ನು ಕಂಡಂತಾಗಿಯೇ ಇಲ್ಲ. ತನ್ನ ಅತೃಪ್ತಿಯನ್ನು ಗುರುಗಳಲ್ಲಿ ಅರಿಕೆ ಮಾಡಿಕೊಂಡಿದ್ದನು. ಅವರೊಡನೆ ಚರ್ಚಿಸುತ್ತಲೂ ಇದ್ದನು.

ಚೆನ್ನಬಸವಣ್ಣನು ಬಂಕದಲ್ಲಿಯ ಗುರುಗಳ ಮಂಚದ ಹತ್ತಿರ ಬಂದು ಕುಳಿತಿದ್ದನು. ಕುಲಪತಿ ವಿದ್ಯಾಭರಣರು ಊಟದ ನಂತರ ಸ್ವಲ್ಪ ವಿರಾಮಕ್ಕಾಗಿ ಅಲ್ಲಿ ಬರುವರು. ಗುರುಗಳನ್ನು ಪ್ರತ್ಯೇಕವಾಗಿ ಕಂಡು ಕೇಳುವದಿದ್ದರೆ ಚೆನ್ನಬಸವಣ್ಣ ಅಲ್ಲಿ ಬಂದು ಕಾದಿರುತ್ತಿದ್ದನು. ತನ್ನ ವಯಸ್ಸಿಗೆ ಮಿಕ್ಕಿದ ಸೂಕ್ಷ್ಮದೃಷ್ಟಿಯಿಂದ ಸಮಾಜ ಧರ್ಮಗಳ ವಿಶ್ಲೇಷಣೆ ಮಾಡುತ್ತಿದ್ದ ಈ ನಚ್ಚಿನ ಶಿಷ್ಯ ಬಂದಾಗ ಗುರುಗಳು ಆನಂದದಿಂದ ಅವನ ಹೃದಯವರಿದು ಮಾತನಾಡುತ್ತಿದ್ದರು. ಒಮ್ಮೊಮ್ಮೆ ತಾವಾಗಿಯೇ ಅವನನ್ನು ಕರೆದು ಕುಳ್ಳಿರಿಸಿಕೊಂಡಿರುತ್ತಿದ್ದರು. ಎಳೆಯವಯದ ಚೆನ್ನಬಸವನ ಜ್ಞಾನವಿಕಾಸದ ವೇಗಕ್ಕೆ ಉಳಿದ ಪ್ರಾಧ್ಯಾಪಕರೂ ಬೆರಗುಬಟ್ಟಿದ್ದರು. ಅಂದು ಗುರುಗಳು ಬಂದೊಡನೆ ಚೆನ್ನಬಸವಣ್ಣ ಎದ್ದನು ಅವರು ಕುಳಿತೊಡನೆ ಅವರ ಪಾದಕ್ಕೆ ನಮಿಸಿ ನಿಂತನು.

"ಕೂಡ್ರು ಚೆನ್ನಬಸವೇಶ, ನಿನ್ನ ಪ್ರಶ್ನೆಗಳು ನನ್ನ ಕಣ್ಣು ತೆರೆಯಿಸಿವೆ. ರಾತ್ರಿಯೆಲ್ಲ ನಿದ್ರೆಬಾರದೆ ತಡಕಾಡಿ ವಿಚಾರಿಸುತ್ತಿದ್ದೇನೆ. ನಮ್ಮ ನಡೆಯಲ್ಲಿ ತಪ್ಪಿದೆ, ಅಂತೆಯೇ ಶಾಂತಿ ಸಿಗದೆ ಹೋಗಿದೆ. ಹತ್ತಿ ಹೊಂದಿದುದರಲ್ಲಿ ಹೆಜ್ಜೆ ಇಡದೆ, ಗಿರಿಶಿಖರಕ್ಕೆ ಹಾರುವ ಮಾತಿನಿಂದ ಯಾವದು ಸಾಧ್ಯವಾದೀತು?"

"ಹೌದು ಗುರುದೇವಾ! ಅದೇ ನನ್ನ ತಳಮಳದ ಮೂಲಕಾರಣ! ಜಲದ ಮೂಲಕ ಮೈಗೆ ಮೆತ್ತಿದ ಕೆಸರನ್ನು ಜಲದಿಂದಲೇ ತೊಳೆಯಬೇಕಲ್ಲದೆ ಹಾಲೆರೆದುಕೊಂಡರೆ ಹಸನಾಗದು. ಶಾಸ್ತ್ರವಿಚಾರಗಳಲ್ಲಿ ಸದಾಚಾರ -

ಪಕ್ಷಿಯಗಳಲ್ಲಿ ಅಳವಟ್ಟಲ್ಲದೆ ಅನಂತ ಜನ್ಮಗಳ ಕರ್ಮಫಲದಿಂದ ಬಂದ ಭವ ಬಂಧನವು ಹರಿಯಬಹುದೇ ಎಂಬುದೇ ತಿಳಿಯದ ಮಾತಾಗಿದೆ"

"ಹರಿಯದು, ನಿನ್ನ ಸಂದೇಹದಲ್ಲಿ ಅರ್ಥವಿದೆ, ಪಾಂಡಿತ್ಯಪ್ರದರ್ಶಿಸು ವವನ್ನು ಬಿಟ್ಟರೆ, ನಾವೆಲ್ಲ ಓದಿನುತೆಯೇ ಇದ್ದೇವೆ, ಭವಬದ್ಧರಾಗಿಯೇ ಇದ್ದೇವೆ. ಉಳಿದವರಂತೆಯೇ ಇದ್ದೇವೆ. ಹಿಂದಿನವರು ನಮಗೇನು ಅಧ್ಯಯನ ಮಾಡಿಸಿದರೋ ಅದನ್ನೇ ಮುಂದಿನವರಿಗೆ ಬೋಧಿಸುತ್ತ ಸಾಗಿದ್ದೇವೆ. ---- ಚೆನ್ನಬಸವಣ್ಣಾ ನಿನ್ನಿಂದ ನಾನು ಆತ್ಮನಿರೀಕ್ಷಣೆಗೆ ಮರಳಿದ್ದೇನೆ. ನೀನು ಸಾಮಾನ್ಯನಲ್ಲ! ಹುಟ್ಟಿನಲ್ಲಿಯೇ ಪ್ರತಿಭಾವಂತನು. ಪ್ರೌಢಸಾಧಕನಾದ ಬಸ ವಣ್ಣನ ಜತೆಯಲ್ಲಿ ಶೈಶವವನ್ನು ಕಳೆದವನು! ಹೆತ್ತತಾಯಿ ನಾಗಲಾಂಬೆ ಪ್ರಬುದ್ಧಮಾತೆಯೆಂದು ಬಲದೇವ ಮಂತ್ರಿಗಳು ನನಗೆ ಹೇಳಿದ್ದರು, ಆ ತಾಯಿಯ ಪರುಷಹಸ್ತದಲ್ಲಿ ಬೆಳೆದ ಪರುಷಮಣಿ ನೀನು."

"ಗುರುದೇವಾ ಹಸುಳೆ ನಾನು"

"ಆದರೇನು? ನಿನ್ನ ಹೃದಯದಲ್ಲಿ ಚಿತ್ಪ್ರಭೆ ಬೆಳಗುತ್ತಿದೆ."

ಈ ಮಾತು ಒಜ್ಜೆಯಾಯಿತು ಚೆನ್ನಬಸವಣ್ಣನಿಗೆ! ತಲೆಸುತ್ತಿ ಕ್ಷಣ ಹೊತ್ತು ಕಣ್ಣುಮುಚ್ಚಿ ಮೌನವಾಗಿ ಕುಳಿತನು. ಬಳಿಕ:

"ಗುರುವೆ, ತಮ್ಮ ಕೃಪೆಯಿಂದ ಅದು ಸಿದ್ಧಿಸಿದರೆ ನಾನು ಧನ್ಯನು, ಆದರೆ ಸದ್ಯಕ್ಕೆ ನಾನು ಆಧ್ಯಾತ್ಮಿಕ ತೃಷೆಯ ಸಂಕಟದಿಂದ ಪರಿತಪಿಸುತ್ತಿದ್ದೇನೆ. ಕಾಣುತ್ತಿರುವದನ್ನು ಅನುಭವಿಸುತ್ತಿರುವದನ್ನು ನೆನಿಸಿ ವ್ಯಥೆಪಡುತ್ತಿದ್ದೇನೆ, ವೇದಶಾಸ್ತ್ರ ಪುರಾಣ ಒಂದೆಡೆ ನಿಲ್ಲುತ್ತಿವೆ. ಅವು ಅನಂತದಲ್ಲಿ ಅಡಗದೆ, ಮುಂದೇನು ಎಂಬ ಸಮಸ್ಯೆಗೆ ಎಡೆಕೊಡುತ್ತಿವೆ. ಇನ್ನು ಕೈಲಾಸಕ್ಕೇರುವ ಶುದ್ಧಶೈವರ ಸುಖ! ಶಿವಸನ್ನಿಧಿ. ಅದೊಂದು ಸ್ಥಾನವಿಶೇಷ! ಅದಕ್ಕಾದರೂ ಇತಿಮಿತಿ ಇರಬೇಕು. ಚ್ಯುತಿಯೂ ಬಿಡಲಾರದುದಷ್ಟೇ? ಅದೆಲ್ಲ ಅಡಗಬೇಕಲ್ಲವೇ? ಸಾಮರಸ್ಯವು ಶೂನ್ಯಸ್ವರೂಪ! ಅಲ್ಲಿ ಮತ್ತೇನೂ ಇಲ್ಲದೆ ಅವಿರಲ ಆನಂದವೊಂದೇ ಕಾಣುತ್ತಿದೆ. ಲಿಂಗಸಾಧನೆಯೇ ಲಿಂಗಾಂಗ ಸಾಮರಸ್ಯ! ಒಮ್ಮೆ ಲಿಂಗಧರಿಸಿ, ಒಮ್ಮೆ ಮುಂದೆ ಇರಿಸಿ ಆರಾಧಿಸುವದು ಅಖಂಡಸಾಧನೆಯಾಗದೆಂದು ತೋರುತ್ತದೆ. ಜೀವಾತ್ಮನು ಪರಮಾತ್ಮನನ್ನು ಹೊಂದಿಕೊಂಡು ಬಂದು ಚಿರಶಾಂತಿಯ ಪಡೆಯಬೇಕಷ್ಟೇ? ಅದರ ಸಾಧನೆ ಹೇಗೆ? ಮಾನವನ ಒಳಹೊರಗಿನ ಬಾಳಿಗೆ ಪರಿಪೂರ್ಣತೆ ಕೊಡಬಲ್ಲ ಪ್ರಜ್ಞೆ, ಯಾವದು? ಓದುವ ಹೇಳುವ ಕೇಳುವ ಮಾತ್ರದಿಂದ ಆಗುವದೇ ಅರಿವು?

ಅಥವಾ ಅರಿವಿಗಾಗಿ ಸಾಧನಕ್ರಮಾಚರಣೆ, ಅದರ ಸಕ್ರಮಸ್ವರೂಪರಚನೆ ಅಗತ್ಯವಲ್ಲವೆ? ಈಗಿರುವ ಧರ್ಮಾಚಾರ ನಿರೂಪಣೆ ದೇವರ ಆರಾಧನೆಗಳ ರೀತಿಗಳು ಸರಿಯಾಗಿರುವವೇ? ಒಂದು ಕಡೆಗೆ ಅಜ್ಞಾನ, ಮೂಢಧರ್ಮಾಚಾರ! ಒಂದು ಕಡೆಗೆ ಜ್ಞಾನದ ಸೋಗು; ಡಾಂಭಿಕ ಭಕ್ತಿ, ಅಜ್ಞಾನಿಗಳ ಶೋಷಣೆ! ಈ ವ್ಯತ್ಯಾಸ ವಿಪರೀತಗಳಿಂದ ನನ್ನ ಒಳಬಗೆ ಕಳವಳಕ್ಕೀಡಾಗಿದೆ."

"ನಿಜವಾಗಿ ಹೇಳಬೇಕೆಂದರೆ. ಅಂತರಾತ್ಮನ ವಿಕಾಸಕ್ಕೆ ಈ ಡಾಂಭಿಕ ಪೂಜಾದಿಗಳು ಸಾತ್ವಿಕ ಸಾಧನಗಳೇ ಅಲ್ಲ."

ಅಲ್ಲ ಗುರುದೇವ,ಅವೆಲ್ಲ ಉದರಪೋಷಣೆಗಾಗಿ, ಪ್ರತಿಷ್ಠಾಪ್ರದರ್ಶನಕ್ಕಾಗಿ ಇರುವವು ಪ್ರತಿಷ್ಠೆಗೆ ಮೆರಗು ಬರುವದು ಮೇಲುಕೀಳುಗಳ ಯೋಜನೆಯಿಂದ. ಆದ್ದರಿಂದ ಅದನ್ನು ಪೋಷಿಸಿಕೊಂಡು ಬರುತ್ತಾರೆ. ಈ ಡಾಂಭಿಕ ಧರ್ಮಚಾರಿಗಳ ಮಾತಿನಲ್ಲಿ ಮಾತ್ರ ಜ್ಞಾನ! ಆಚಾರದಲ್ಲಿ ಇಲ್ಲ. ಜ್ಞಾನವು ಕ್ರಿಯೆಯಲ್ಲಿ ಸಮರಸಗೊಂಡರೆ ಅದು ಸಾಧನೆ! ಕತ್ತಲೆಯಲ್ಲಿ ಕುಳಿತು ಜ್ಯೋತಿಯ ಮಾತನಾಡಿದರೆ ಬೆಳಕಾಗದು. ಬೆಂಕಿಯು ಹೊತ್ತಿಸಿ ದೀಪ ಹಚ್ಚುವದು ಬೆಳಕಿಗೆ ದಾರಿ!"

"ಹೌದು ಚೆನ್ನಬಸವಣ್ಣಾ ಹೌದು. ನಾವೂ ನಮ್ಮ ಪ್ರಾಧ್ಯಾಪಕರೂ ಹೀಗೆ ಆಚಾರವಿಲ್ಲದ ಬಾಹ್ಯಾಡಂಬರದ ವ್ಯಕ್ತಿಗಳೇ ಆಗಿದ್ದೇವೆ ಶಾಸ್ತ್ರ ಜ್ಞಾನವನ್ನು ನಡೆವಳಿಯಲ್ಲಿ ತಾರನೆ, ಕತ್ತಲೆಯಲ್ಲಿ ಉಳಿದ ಅಜ್ಞಾನಿಗಳೇ ಸರಿ! ಇದನ್ನೇ ಮುಂದಿಟ್ಟುಕೊಂಡು ಪ್ರತಿಪಾದಿಸಿದ ವಾಮಶಕ್ತಿಗಳನ್ನು ನಾವು ಉಪೇಕ್ಷೆಯಿಂದ ಕಂಡೆವು"

ಹೌದು ಗುರುವರ್ಯಾ, ಅವರು ಬರೆದಿಟ್ಟ ಟೀಕೆ ಟಿಪ್ಪಣೆಗಳನ್ನು ನೋಡಿದರೆ, ಅವರು ವೇದಶಾಸ್ತ್ರಗಳ ಪರಿಪೂರ್ಣವಲ್ಲದ ಶಾಂತಿಸಾಧನೆಗಳಿಗೆ ತೃಪ್ತಿಯಿಲ್ಲದೆ ಹೋಗಿದ್ದಾರೆ. ಅವರ ಮುಂದಿನ ಟಿಪ್ಪಣೆಗಳು ಆತ್ಮಶೋಧನೆಗೆ ತೊಡಗಿದಂತಿವೆ. ಅದರ ಪರಿಪೂರ್ಣತೆಯನ್ನು ಕಾಣುವದಕ್ಕಾಗಿಯೇ ಅವರು ಇಲ್ಲಿಂದ ಹೋಗಿದ್ದಾರೆಂಬಲ್ಲಿ ಸಂದೇಹ ಕಾಣುವದಿಲ್ಲ"

"ಇಲ್ಲಿರುವವರ ದುರ್ಭಾಗ್ಯ ಅದು."

"ಅವರು ಎಲ್ಲಿಯಾದರೂ ಪರಮ ತತ್ತ್ವ ಸಾಧನೆಯಲ್ಲಿಯೇ ಇರಬಹುದು ಪರಿಪೂರ್ಣದೆಡೆಗೆ ಸಾಗಿರಬಹುದು. ಅದನ್ನು ಸ್ವಾಯತ ಮಾಡಿಕೊಂಡೂ ಇರಬಹುದು......ಇರಬಹುದು" ದೃಷ್ಟಿ ಅಂತರ್ಮುಖವಾಗಿತ್ತು.

"ಅವರನ್ನು ಕಳೆದುಕೊಂಡ ನಾವು ದುರ್ದೈವಿಗಳು. ಅವರು ಹೊರಟು ಹೋದುದಕ್ಕೆ ಕೆಲವರು ವ್ಯಥೆಪಟ್ಟರೂ ಕೆಲವು ಶಾಸ್ತ್ರಿಗಳು ತಮ್ಮ ಐಹಿಕ ಸುಖ ಲಾಲಸೆಗೆ ನಿರ್ವಿಘ್ನವಾಯಿತೆಂದು ಸಂತಸಪಟ್ಟರು. ವಾಮಶಕ್ತಿಗಳ ಬೆಳಕನರಸುವ

ಮಾರ್ಗವನ್ನು ನಾನು ಕೂಡ ಕಂಡು ಹಿಡಿಯಲಿಲ್ಲ. ಈಗ ನಿನ್ನ ಆತ್ಮತೇಜದ ನುಡಿಗಡಿಗಳು ನನ್ನನ್ನುಎಚ್ಚರಿಸುತ್ತಿವೆ."

"ಗುರುವೆ, ಇದೇ ವಿದ್ಯಾಲಯದಲ್ಲಿಯೇ ಪಡೆದ ವಿದ್ಯಾವಿಚಾರಗಳೇ ಮನದಲ್ಲಿ ಮಂಥನವಾಗುತ್ತಿರುವಾಗ ಬಂದ ಮಾತುಗಳಿವು. ನನ್ನದೇನು ವಿಶೇಷ ಗುರುವರ್ಯಾ?

ಈ ವಿದ್ಯಾಲಯದಲ್ಲಿ ಓದಿದವರು ಓದಿಸಿದವರು ಎಷ್ಟು ಜನರಿಲ್ಲ? ಅವರೆಲ್ಲ ಒರೆಗೆ ಹಚ್ಚಿ ಅರಿತರೇ? ಅಳವಡಿಸಿಕೊಂಡರೇ? ಅವರೆಲ್ಲ ಕಾಯವಿದ್ಯೆಯ ಬಾಯ ಮಾತಿನ ಮಾಯಾಮಾರಿಗೆ ಒಳಗಾದರು."

"ಅರಿತಳವಡಿಸಿಕೊಂಡವರೂ ಇದ್ದಾರೆ. ವಾಮಶಕ್ತಿಗಳು ಅಂತಹರೆಂಬುದನ್ನು ತಾವು ಬಲ್ಲಿರಿ. ತಾವೂ ಕೂಡ ಅಂತಹ ಅರಿವಿಗೆ ಆತುರ ಪಟ್ಟವರಲ್ಲವೇ? ವಿದ್ಯಾಲಯದ ಹೊರಗು ಕೂಡ ತತ್ತ್ವದರ್ಶನಗಳಲ್ಲಿ ಸತ್ಯವನ್ನು ಶೋಧಿಸಿ, ಸ್ವಾನುಭವದಲ್ಲಿ ಅರಗಿಸಿಕೊಳ್ಳುತ್ತಿರುವವರು ಅಲ್ಲಲ್ಲಿ ಉದಯವಾಗುತ್ತಲಿದ್ದಾರೆ. ವಚನಗಳೆಂಬ ಅವರ ಅಮೃತವಾಣಿಗಳು ಈಗ ತೂರಿಬರುತ್ತಲಿವೆ. ಇದೀಗ ತಾವು ಹೇಳಿದುದನ್ನೇ ಢಕ್ಕೆಯ ಮಾರಯ್ಯನೆಂಬ ಅನುಭಾವಿಗಳು ಕಂಡು ಹಾಡಿದ ಮಾತಿದು!

'ಅರಿವುಳ್ಳವಂಗೆ ಅರಿವನರಿದಿಹೆನೆಂಬುದೇ ಮಾಯೆ.
ಮೂರ ಮರೆದು ಬೇರೊಂದುವ ಕಂಡಿಹೆನೆಂಬುದೆ ಮಾಯೆ;
ನುಡಿಯ ನುಡಿವವರಲ್ಲಿ ಎಡ ಮಾತಾಡಿ ವಾದಿಸುವದೇ ಮಾಯೆ.

ಎಂದರಲ್ಲದೆ 'ಢಕ್ಕೆಯ ಉಲುಹು ಅಡಗುವದಕ್ಕೆ ಮುನ್ನವೆ ನಿಶ್ಚಯಿಸಿಕೊಳ್ಳಿ ಎನ್ನುತ್ತಾರೆ ಆ ಮಾರಯ್ಯನವರೇ: ಢಕ್ಕೆಯ (ದೇಹದ) ಪ್ರಯೋಜನವನ್ನೇ ಅರಿಯದ ಮಾನವರಿಗೆ, ತಮಿಳು ಕನ್ನಡ ನಾಡನಡುವೆ ಮೆರೆದ, ಮೆರೆಮಿಂಡ ದೇವನ ಕೆಲವು ನುಡಿಗಳಿವು:

'ಕೈಯಲ್ಲಿ ಕೊಂಡೊಡೇನು? ಬಾಯಿಗೆ ಬಂದಲ್ಲದೆ ಒಡಲು ಎಡೆಯಿಲ್ಲ; ಮಾತಿನಲ್ಲಿ ಆಡಿದಡೇನು? ಮನದಲ್ಲಿ ಅರಿತಡೇನು? ಆ ಇರವು ಆತನ ಮುಟ್ಟಬೇಕು ಐಘಟದೂರ ರಾಮೇಶ್ವರ ಲಿಂಗವನರಿವುದಕ್ಕೆ!'

'ಮನ ಮುಟ್ಟದ ಪೂಜೆ, ಮಣ್ಣುಗೋಡೆಯ ತೊಳೆದು ನಿರ್ಮಲವನರಸುವಂತೆ'..."

"ನಿಜ ನಿಜ ಚೆನ್ನಬಸವಣ್ಣಾ ಅದನ್ನೇ ಮಾಡುತ್ತಿದ್ದೇವೆ ನಾವು. ಸಾಂಪ್ರದಾಯಕವಾಗಿ ಸಂಸ್ಕೃತದಲ್ಲಿಯ ಶಾಸ್ತ್ರಗಳನ್ನೇ ಓದಿಸುತ್ತಿರುವ ನಾವು, ನಮ್ಮ ವಿದ್ಯಾಲಯದ ವರೆಗೆ ಜಂಗಮರು ಬಂದು ಹಾಡುತ್ತಿರುವ ಈ ವಚನಗಳನ್ನು ಅಲಕ್ಷಿಸಿ ಬಿಟ್ಟಿದ್ದೇವೆ. ಇಂಥವರಿಗೆ ಮುಂದಿನ ಬೆಳಕು ಕಾಣಲಾರದು."

"ಉಪನಿಷದೋಕ್ತ ಅರ್ಪಣಭಾವವನ್ನು ಈ ಶರಣರು ಹೇಗೆ ವ್ಯಕ್ತ ಮಾಡಿದ್ದಾರೆ ನೋಡಿರಿ ಗುರುದೇವಾ!

ತಾ ಮೀವನ್ನಕ್ಕ ಲಿಂಗಕ್ಕೆ ಮಜ್ಜನ;
ತಾ ನುಂಬನ್ನಕ್ಕ ಲಿಂಗಕ್ಕೆ ನೈವೇದ್ಯ;
ತನ್ನ ತನುಭೋಗವ ಮಾಡುವನ್ನಕ್ಕ ಲಿಂಗಾರ್ಪಿತ ಮುಖವಾಗಬೇಕು.

ಕೆಲವರೇ ಭದ್ರ ವಾಗಿರಿಸಿಕೊಂಡಿರುವ ತತ್ವಜ್ಞಾನವನ್ನು ಹೀಗೆ ಸಾಮಾನ್ಯರ ಹೃದಯದಾಳಕ್ಕೆ ಇಳಿಯುವಂತೆ ಅವರ ಭಾಷೆಯಲ್ಲಿ ಹೇಳಿದುದರಲ್ಲಿ ಯಾವ ಕೊರತೆ ಇದೆ ಗುರುದೇವಾ? ನಾನು ಸಂಗಮದಲ್ಲಿರುವಾಗ ದೇವರದಾಸಿಮಯ್ಯ ನವರ ವಚನಗಳ ಕಟ್ಟು ಬರುತ್ತಿದ್ದವು. ಅಲ್ಲಿ ನನಗೆ ಸಂಸ್ಕೃತದ ಶಾಸ್ತ್ರಗಳಗಿಂತ ಮರ್ಮಾರ್ಥ ಸುಲಭವಾಗುತ್ತಿತ್ತು. ಆದರೂ ವಿವಿಧ ಧರ್ಮದರ್ಶನಗಳ ಅಭ್ಯಾಸ ಅವಶ್ಯವಲ್ಲವೇ ಗುರುದೇವಾ? ಅದನ್ನು ತಮ್ಮ ಕೃಪೆಯಿಂದ ಸಂಪಾದಿಸುತ್ತಿದ್ದೇನೆ. ಆದರೆ ಕ್ಷಮಿಸಬೇಕು, ಈ ಶಾಸ್ತ್ರಾಭ್ಯಾಸವು ಬೌದ್ಧಿಕ ಬೆಳವಣಿಗೆ ಮಾಡಬಹುದು. ವಚನಗಳು ಅಂತರಂಗದ ಅನುಭವಕ್ಕೆ ಬರುವವು. ಇದು ನನಗೆ ಹೊಳೆದ ಮಾತು ಗುರುವೇ"

"ಚೆನ್ನಬಸವಣ್ಣಾ ಕ್ಷಮೆಯ ಮಾತೇಕೆ? ಮೊದಮೊದಲು ನಿನ್ನ ದಿಟ್ಟವಾಣಿಗೆ 'ಕಟೂಕ್ತಿ ಇವನದು' ಎನ್ನುತ್ತಿದ್ದೆವು. ಅವೇ ನಿನ್ನ ಮಾತು ಈಗ ಹೃದಯದ ಬಾಗಿಲ ತೆರೆಯಿಸುವ ಸ್ಪಷ್ಟೋಕ್ತಿಗಳೆಂದು ನನಗೆ ಅರ್ಥವಾಗುತ್ತಿದೆ. ನಿನಗೆ ಹೊಳೆದುದು ವಸ್ತುಸ್ಥಿತಿಯೇ ಸರಿ."

"ನಾನು ಧನ್ಯನು ಗುರುವೆ, ಜೀವಾತ್ಮನು ಪರಮಾತ್ಮನತ್ತ ಪ್ರವರ್ತಿಸುತ್ತಿರುವಾಗ ಉಂಟಾಗುವ ಹೃದಯಸ್ಪಂದನಗಳ ವ್ಯಕ್ತರೂಪಗಳೇ ವಚನಗಳೆಂದು ನನ್ನ ಭಾವನೆ. ದೇವರದಾಸಿಮಯ್ಯನವರ ವಚನಗಳು ಮಲತ್ರಯವನ್ನು ಕತ್ತರಿಸುವದಕ್ಕೆ ಶಿವಾಭಿವ್ಯಕ್ತಿಗೆ ಸಹಾಯಕವಾಗಿವೆ. ಇವರ ವಚನಗಳಿಂದ ಪ್ರೇರಿತನಾದ ನಮ್ಮ ಮಾವನ ತೀಕ್ಷ್ಣ ಭಾವನೆಗಳೂ ತತ್ತ್ವನಿರೂಪಣೆಗಳೂ ವಚನಗಳಾಗಿ ರೂಪುಗೊಳ್ಳುತ್ತಲಿವೆ. ನಾನು ಸಂಗಮದಲ್ಲಿರುವಾಗಲೇ ಅಲ್ಲಿಗೆ ಬರುತ್ತಿದ್ದ ಬಹಳ ವಚನಗಳನ್ನು ಬಸವೇಶಮಾವ ಸಂಗ್ರಹಿಸಿದ್ದಾರೆ. ನಾನು ಕೆಲವನ್ನು ಬರೆದಿಟ್ಟುಕೊಂಡಿದ್ದೇನೆ. ಈ ವಚನಗಳ ವಿಶೇಷಾರ್ಥಗಳು ಉಪನಿಷದ್ವಾಣಿಗೆ ಸರಿಮಿಗಿಲಾಗಿವೆ"

"ಇನ್ನು ನಾನು ಅವುಗಳನ್ನು ನೋಡುತ್ತೇನೆ. ಚೆನ್ನಬಸವಣ್ಣಾ ನೀನು ಆಗಲೆ ಹೇಳಿದಂತೆ ಸಾಧನಕ್ರಮಾಚರಣೆ, ಇದರ ಸಕ್ರಮಸ್ವರೂಪರಚನೆ ಅತ್ಯಗತ್ಯ ವಾಗಿದೆ. ಹುರುಳಿಲ್ಲದ ಸ್ವರ್ಗಾದಿ ಭ್ರಾಂತಿಗಳನ್ನು ಬಿಟ್ಟುಬಿಡುವಂತಹ ಸಾಧನ ಮಾರ್ಗವನ್ನು ನೀನು ರೂಪಿಸಿ ಬೋಧಿಸಬಲ್ಲೆ. ಈಗ ಕೇಳುತ್ತಿದ್ದಂತೆ ಬಸವೇಶ ದಂಡನಾಯಕರು ನಡಿಸುತ್ತಿದ್ದ ಶಿವಾನುಭವಗೋಷ್ಠಿ ನಿನ್ನ ವಿಚಾರಮಂಥ ನದ ಕ್ಷೇತ್ರವಾಗಬಹುದು. ನಿಶ್ಚಲಯತ್ನಗಳಿಂದ ತಮ್ಮ ವೈಚಾರಿಕ ಕ್ರಾಂತಿ ಯನ್ನು ಸಿದ್ಧಿಗೊಯ್ದು ಪ್ರಕಟವಾಗುವ ವಾಮಶಕ್ತಿಗಳು ನಿನ್ನ ಸಿದ್ಧಾಂತ ಗಳನ್ನು ಪುಟಿಕ್ಕಿಕ್ಕಿ ಬೆಳಗಬಹುದು. ಅವರ-ನಿನ್ನ ವಿಚಾರ ವೈಖರಿಯಲ್ಲಿಯ ಓಜಸ್ಸು ತೇಜಸ್ಸು ಒಂದೇ ಬಗೆಯವಾಗಿವೆ. ನಿಮ್ಮಿಬ್ಬರಿಂದ ಧರ್ಮಸಿದ್ಧಾಂತ ಗಳ ವಿಶ್ಲೇಷಣೆ, ನಿಜತತ್ವದ ನಿಲುಗಡೆ, ಪ್ರಚಾರ ಇವುಗಳ ತೀವ್ರತರದ ಪ್ರಯತ್ನಗಳು ನಡೆಯುವವು. ಧರ್ಮಾಚಾರದಲ್ಲಿಯ ಕೊಳೆ ಕಳಚಿ ಮಾನವ ಕುಲದ ಕಲ್ಯಾಣದ ಮಾರ್ಗವು ಸುಗಮವಾಗುವದು. ನನ್ನ ಅಂತರಂಗದಲ್ಲಿ ಮೂಡುತ್ತಿರುವ, ನಿನ್ನ ಭವಿಷಜ್ಜೀವನದ ಚಿತ್ರವಿದು ಚೆನ್ನಬಸವಣ್ಣಾ! ನೀನು ಸುಜ್ಞಾನಿ, ನೀನು ಧನ್ಯನು! "

ಅನಿರೀಕ್ಷಿತವಾದ ಗುರುಗಳ ಉದ್ಗಾರಗಳನ್ನು ಕೇಳುತ್ತಿದ್ದಂತೆ, ಚೆನ್ನ ಬಸವಣ್ಣ ಚಕಿತನಾಗಿ ತಲೆಯೆತ್ತಿ ನೋಡಿದನು. ತೇವುಗೂಡಿದ ತೇಜಃ ಪುಂಜವಾದ ಗುರುವಿನ ಕಣ್ಕಾಂತಿಯನ್ನು ಕಂಡು ಉತ್ಕಂಠಿತನಾಗಿ 'ಗುರುವೆ, ಗುರುವೆ ' ಎನ್ನುತ್ತ ಅವರ ಪಾದದ ಮೇಲೆ ತಲೆಯಿಟ್ಟನು. ವಿದ್ಯಾಭರಣರು ಮಂಚದಿಂದೆದ್ದು ಈ ನಚ್ಚಿನ ಪರಮ ಶಿಷ್ಯನನ್ನು ಹಿಡಿದೆತ್ತಿ ಅಪ್ಪಿಕೊಂಡರು,

"ಚೆನ್ನಬಸವಣ್ಣಾ, ಈ ಸಲದ ಘಟಿಕೋತ್ಸವದಲ್ಲಿ ಸ್ನಾತಕನಾಗುವೆ. ಈಗ ಬನವಾಸಿಯಲ್ಲಿರುವ ಬಸವೇಶ್ವರ ದಂಡನಾಯಕರನ್ನೇ ಘಟಿಕೋತ್ಸವದ ಅಧಿಪತಿಗಳೆಂದು ಆಮಂತ್ರಿಸುವೆವು. ಈ ಸಮಾರಂಭದಲ್ಲಿ ನಿನ್ನ ಕಾರ್ಯಕ್ರ ಮಗಳೇನು ಗೊತ್ತುಮಾಡಿಕೊಂಡು ಅದರ ಸಿದ್ಧತೆಯಲ್ಲಿರು."

"ಆಗಲಿ ಗುರುದೇವಾ"

ಚೆನ್ನಬಸವಣ್ಣ ಮತ್ತೊಮ್ಮೆ ವಂದಿಸಿ ವಿನಯದಿಂದ ಹಿಂದೆ ಸರಿದು ಹೋದನು.

---

## ೩ ಅನುಭವಮಂಟಪದ ಅಧ್ವರ್ಯು

ಇತ್ತ ಕಲ್ಯಾಣದಲ್ಲಿ ಬಸವಣ್ಣನವರ ಭಾಗ್ಯಚಕ್ರ ವೇಗವಾಗಿ ತಿರುಗುತ್ತಿತ್ತು. ಅಕ್ಕನಾಗಮ್ಮನವರಿಂದ ಒದಗುತ್ತಿದ್ದ ಸ್ಫೂರ್ತಿ ಅವರ ಅಚ್ಚಾಗಿತ್ತು. ಬಿಜ್ಜಳರಾಜನ ಸಮ್ಮುಖದ ಕರಣಿಕನಾಗಿ ಕಾಯಕ ಸ್ವೀಕರಿಸಿದ ಬಸವೇಶರು ತಮ್ಮ ಬುದ್ಧಿಚಾತುರ್ಯ - ಕರ್ತವ್ಯದಕ್ಷತೆಗಳಿಂದ ಬೇಗನೆ ಸಮ್ಮುಖದ ಕಾರ್ಯದರ್ಶಿಯಾದರು. ಸಾಮ್ರಾಜ್ಯದ ಆರ್ಥಿಕ ತೊಂದರೆಯ ಕಾರಣಗಳನ್ನು ಶೋಧಿಸಿ, ಅವುಗಳನ್ನು ಸರಿಪಡಿಸುವಲ್ಲಿ ಬಿಜ್ಜಳನಿಗೆ ನೆರವಾದರು. ಇದನ್ನು ಮೆಚ್ಚಿದ ಬಿಜ್ಜಳನು ಇವರನ್ನು ರಾಜ್ಯಭಾಂಡಾರದ ಅಧಿಕಾರಿಯನ್ನಾಗಿ ಮಾಡಿದನು.

ಮನೆಯಲ್ಲಿ ಬಸವಣ್ಣನವರ ಲಿಂಗಪೂಜೆ, ಜಂಗಮದಾಸೋಹ, ಅನುಭವಗೋಷ್ಠಿ, ದಾನ ಪರೋಪಕಾರಾದಿ ಜೀವನವೂ ಅಭಿವೃದ್ಧಿ ಹೊಂದುತಲಿತ್ತು. ಬಲದೇವ ಮಂತ್ರಿಯು ಶಿವಾಧೀನವಾಗುವಾಗ ಅವನ ಮಹಾಮಂದಿರ ಮತ್ತು ವಿತ್ತ ಸೊತ್ತುಗಳನ್ನು ಬಸವೇಶ ತನಗಾಗಿ ಸ್ವೀಕರಿಸಲು ನಿರಾಕರಿಸಿದರು. ಅದರಿಂದ ಆತನು ಮಂದಿರವನ್ನು ಧರ್ಮಕಾರ್ಯಗಳಿಗೂ ಚರಾಸ್ತಿಯನ್ನು ದಾಸೋಹಕ್ಕೂ ವಿನಿಯೋಗಿಸಲು, ಮಗಳು - ಅಳಿಯಂದಿರಿಗೆ ವಹಿಸಿ ಶಾಂತವಾಗಿದ್ದನು. ಬಸವಣ್ಣನವರು ಆ ಮನೆಯನ್ನು ಮಹಮನೆಯಾಗಿ ಮಾರ್ಪಡಿಸಿದರು. ಮಹಮನೆ ಅಂದರೆ 'ಧ್ಯಾನ ಶಿವಾರ್ಚನೆ, ಅನುಭಾವಗಳ ಸದನ' ಅದರ ಅಂಗವಾದ ಅನುಭವ ಮಂಟಪದಲ್ಲಿ ಶಿವಾನುಭವಗೋಷ್ಠಿಯನ್ನು ನಡೆಯಿಸಹತ್ತಿದರು. ತಮ್ಮ ವಾಸಕ್ಕೆ ಹತ್ತಿರದಲ್ಲಿ ಬೇರೆ ಮಂದಿರ ಕಟ್ಟಿಕೊಂಡಿದ್ದರು. ಕರ್ಮಕಾಂಡಿಗಳ ಅಸಮಾನತೆ, ಡಾಂಭಿಕತೆ, ಶೋಷಣೆ ಹಿಂಸೆಗಳಿಗಾಗಿ ಜಿಗುಪ್ಸೆಗೊಂಡ ಜನತೆ ಬಸವಣ್ಣನವರ ಅನುಭಾವಗೋಷ್ಠಿಯತ್ತ ಗಮನ ಹರಿಸಿತು. ಅದರಲ್ಲಿ

ಜಾತಿಕುಲಗಳ ಭೇದವಿಲ್ಲದೆ ಶಿವಭಕ್ತಿಯಲ್ಲಿ ಸಮಾನತೆ
ಸದ್ಭಕ್ತಿಸದಾಚಾರಯುಕ್ತ ಶಿವೋಪಾಸನೆ
ದಯಾಮೂಲವಾದ ಸಾಮಾಜಿಕ ಧರ್ಮ
ಧಾರ್ಮಿಕ ಜೀವನದಲ್ಲಿ ಸ್ತ್ರೀ ಪುರುಷರ ಸಮಾನತೆ
ಪ್ರಾಮಾಣಿಕ ದುಡಿತದಿಂದ ನಡಿಸುವ ಸ್ವಾವಲಂಬನದ ಜೀವನ.
ನಿರಹಂಕಾರಯುಕ್ತ ದಾಸೋಹಭಾವ

ಶಿವಾರ್ಪಣ ತತ್ತ್ವದ ಸಂಸಾರ ನಿರ್ವಹಣೆ

ಇಹದಲ್ಲಿಯ ಪರವನ್ನು ಸಾಧಿಸಿ, ಲಿಂಗಾಂಗ ಸಾಮರಸ್ಯವಾಗುವ ಶಿವ ಯೋಗ ವಿಧಾನ

ಈ ಕ್ರಾಂತಿಕಾರಿ ವಿಚಾರಗಳು ಚರ್ಚಿಸಲ್ಪಡುತ್ತಿವೆ. ಪರಿಷ್ಕೃತ ಧರ್ಮ ತತ್ತ್ವಗಳು ರೂಪಗೊಳ್ಳುತ್ತಲಿವೆ, ಎಂಬುದನ್ನು ಕೇಳಿದ ಜನರು ತುಂಬ ಆಕರ್ಷಿತರಾದರು. ದೇಶದ ವಿವಿಧಭಾಗಗಳಿಂದ ಧರ್ಮಜಿಜ್ಞಾಸುಗಳು ಅದರಲ್ಲಿ ಭಾಗವಹಿಸಲು ಕಲ್ಯಾಣಕ್ಕೆ ಧಾವಿಸಿಬಂದರು. ಅದರಲ್ಲಿ ಹಲವರು ಬಸವಣ್ಣನವರ ಕಾರ್ಯಗಳಿಗೆ ಬೆಂಬಲವಾಗಿ ನೆರವಾಗಿ ನಿಂತರು. ಅವರು ಶರಣರು ಅಥವಾ ಪ್ರಮಥರು ಎಂಬ ಅಭಿದಾನ ಪಡೆದರು. ಇವರಿಗೆ ಬಸವೇಶ್ವರರು ಕೇಂದ್ರಶಕ್ತಿಯಾದರು. ಅವರ ಕೀರ್ತಿ ದೂರ ಹಬ್ಬಿತು.

ಈ ಮಧ್ಯದಲ್ಲಿ ಬಿಜ್ಜಳರಾಜನಿಗೆ ಒಂದು ಸುವರ್ಣಶಾಸನ ದೊರೆತಿದ್ದಿತು. ಅದನ್ನು ಯಾರೂ ಓದಲು ಬಾರದ ಅಪರಿಚಿತ ಲಿಪಿಯಲ್ಲಿ ಬರೆಯಲಾಗಿತ್ತು. ಆದರೆ ಬಸವಣ್ಣನವರು ಯುಕ್ತಿಯಿಂದ ಆ ಶಾಸನದ ಲಿಪಿಯನ್ನು ಗೊತ್ತುಹಚ್ಚಿ ಓದಲು ಶಕ್ತರಾದರು, ಆ ಶಾಸನದಲ್ಲಿ ಬರೆಯಲ್ಪಟ್ಟಂತೆ ಬಿಜ್ಜಳರಾಜನಿಗೆ, ಸಿಂಹಾಸನದ ಕೆಳಮನೆಯಲ್ಲಿ ನಿಕ್ಷೇಪಗೊಳಿಸಿದ ಸುವರ್ಣ ನಾಣ್ಯಗಳ ಅಪಾರ ಧನರಾಶಿ ದೊರಕಿತು. ಬಿಜ್ಜಳನು ಹರ್ಷಪೂರಿತನಾಗಿ ಬಸವಣ್ಣನವರ ಜಾಣತನಕ್ಕೆ ತಲೆದೂಗಿ, ಅವರನ್ನು ರಾಜಸಭೆಯಲ್ಲಿ ಸತ್ಕರಿಸಿದನು. ಬಲದೇವನಿಂದ ತೆರವಾಗಿ ಉಳಿದಿದ್ದ ಮಹಾಮಂತ್ರಿ ಪದವನ್ನು ಅವರಿಗೆ ಕೊಟ್ಟು, ಮಹಾದಂಡನಾಯಕ ಪದವಿಯನ್ನೂ ನೀಡಿದನು. ಮತ್ತು ಅವರ ಯೋಜನೆಯಂತೆ ದೊರೆತ ಧನರಾಶಿಯನ್ನು ಸರ್ವ ಪ್ರಜಾಜನರ ಕಲ್ಯಾಣಕ್ಕೆ ವಿನಿಯೋಗಿಸಲಾಗುವುದೆಂದು ಸಾರಿದನು.

ಗಂಗಾಂಬೆಯ ದೊಡ್ಡಪ್ಪನ ಮಗಳು ನೀಲಾಂಬಿಕೆ ಬಿಜ್ಜಳರಾಜನ ಸಾಕುತಂಗಿಯಾಗಿದ್ದಳು. ಗಂಗಾಂಬೆ–ಬಸವೇಶ್ವರರ ಮದುವೆಯ ಸಂದರ್ಭದಲ್ಲಿಯೇ ಬಸವಣ್ಣನವರ ಭಕ್ತಿ, ಗುಣ, ರೂಪ, ಓಜಸ್ಸು, ತೇಜಸ್ಸುಗಳನ್ನು ಕಂಡಿದ್ದ ನೀಲಾಂಬೆ ಅವರಲ್ಲಿಯೇ ಅನುರಕ್ತಳಾಗಿ ಆತ್ಮವನ್ನು ಅವರಿಗೆ ಅರ್ಪಿಸಿ, ಅಂತರಂಗದಲ್ಲಿ ಅವರ ಆರಾಧನೆ ಮಾಡುತ್ತಿದ್ದಳು. ಆದರೆ ಪ್ರತ್ಯಕ್ಷವಾಗಿ ತನ್ನ ಬಯಕೆ ನೆರವೇರುವದು ಅಸಾಧ್ಯವೆಂದು ಮನದಲ್ಲಿ ಕೊರಗುತ್ತಿದ್ದಳು. ಬಸವಣ್ಣನವರ ಅಧಿಕಾರವ್ಯಾಪ್ತಿ ಮತ್ತು ಕೀರ್ತಿ ಬೆಳೆದಂತೆ ಆಕೆಯ ಆ ಕೊರಗು ಇನ್ನಿಷ್ಟು ಹೆಚ್ಚಾಗಿ ನವೆದುಹೋದಳು. ಇದನ್ನರಿತ ರಾಜದಂಪತಿಗಳು ಮತ್ತು ಅಕ್ಕನಾಗಮ್ಮ ... ವರಿ

ಸಲು ಬಸವಣ್ಣನವರ ಮನವೊಲಿಸಿದರು. ಗಂಗಾಂಬೆಯೂ ತನ್ನ ತೆರೆ ಹೃದಯದಿಂದ ನೀಲಾಂಬೆಯನ್ನು ತನ್ನ ಜತೆಗೆ ಸ್ವಾಗತಿಸಲು ಸಿದ್ಧಳಾಗಿ ಪತಿಯನ್ನು ಪ್ರಾರ್ಥಿಸಿದಳು. ನೀಲಾಂಬೆಗೆ ಲಿಂಗಧಾರಣವಾಗಿ ಬಸವಣ್ಣನವ ರೊಡನೆ ಮದುವೆಯಾಯಿತು. ನೀಲಲೋಚನೆ ಮೂಲತಃ ಭಕ್ತಿಗೊಲಿದ ಬಾಲೆ! ತಾಯಿಯಿಲ್ಲದೆ ಬೆಳೆದ ಆಕೆಗೆ ಸೇವಾಭಾವ ಮೈಗೂಡಿತ್ತು. ಅರಮನೆ ಯಲ್ಲಿ ಬೆಳೆದದ್ದರಿಂದ. ಸಾಮುದಾಯಿಕ ಕಾರ್ಯಕ್ರಮಗಳ ಯೋಜನೆ ಮಾಡುವಲ್ಲಿ ನಡಿಸುವಲ್ಲಿ ಬಲ್ಲವಳಾಗಿದ್ದಳು. ಈ ಮುಂತಾದ ಒಳ್ಳೆಯ ಗುಣ ಗಳು ಬಸವನ ಬಯಸಿ ಮಾಡಿದ ತಪದಲ್ಲಿ, ಅಗ್ನಿಸ್ಪರ್ಶ ಮಾಡಿದ ಚಿನ್ನ ದಂತೆ ಉಜ್ವಲಗೊಂಡವು.

ಮಹಮನೆ–ಅನುಭವಮಂಟಪಗಳ ವ್ಯವಸ್ಥೆಯನ್ನು ಅಕ್ಕನಾಗಮ್ಮ ಮತ್ತು ಹಿರಿಯ ಶರಣರ ಮೇಲೆ ಬಿಟ್ಟು, ಬಸವಣ್ಣನವರು ರಾಜಕಾರ್ಯಕ್ಕಾಗಿ ಕೆಲವು ದಿವಸ ಬನವಾಸಿಯಲ್ಲಿದ್ದರು. ಆಗ ಸತಿಯರಿಬ್ಬರೂ ಸಂಗಡ ಇದ್ದರು ಚೆನ್ನಬಸವಣ್ಣನ ಅಧ್ಯಯನದ ಕೊನೆಯ ವರ್ಷದ ಘಟಿಕೋತ್ಸವಕ್ಕೆ ಬಸವ ಣ್ಣನವರು ಮುಖ್ಯರಾಗಿ ಬರಬೇಕೆಂದು ವಿದ್ಯಾಭರಣರು ಅವರಿಗೆ ಬಿನ್ನಪ ಕಳಿಸಿದ್ದರು. ಆದರೆ ಬಿಜ್ಜಳರಾಜನಿಂದ ಅವಸರದ ಕರೆ ಬಂದುದರಿಂದ ಬಸ ವಣ್ಣನವರು ಬನವಾಸಿಯಲ್ಲಿಯೇ ಮಡದಿಯರನ್ನು ಬಿಟ್ಟು ಕಲ್ಯಾಣಕೆ ಹೋದರು. ಸ್ನಾತಕನಾದ ಚೆನ್ನಬಸವಣ್ಣ ಉತ್ಸವದ ನಂತರ ಬನವಾಸಿಗೆ ಬಂದು ತನ್ನ ನಲುಮೆಯ ಅಕ್ಕಂದಿರಾದ ಗಂಗಾಂಬೆ ನೀಲಾಂಬೆಯರನ್ನು ಕರಕೊಂಡು ತಮಗಾಗಿ ಬಂದ ಸರಂಜಾಮದ ಸಹಾಯದಿಂದ ಕಲ್ಯಾಣಕ್ಕೆ ಪ್ರಯಾಣ ಮಾಡಿದನು.

§ § § §

ಇಂದಿನ ಅನುಭವಗೋಷ್ಠಿಗೆ ಒಂದು ವಿಶೇಷ ಮಹತ್ವವಿದೆ. ಭಕ್ತರು ಶರಣರು ಸಾಧಕಶಿವಯೋಗಿಗಳು ತಂಡತಂಡವಾಗಿ ಬಂದು ಕುತೂಹಲಕಾರಿಗ ಳಾಗಿ ಕುಳಿತಿದ್ದಾರೆ. ಪ್ರತಿಭಾವಂತ ಜ್ಞಾನಿಯೆಂದು ಹೆಸರು ಪಡೆದು ಬಂದಿದ್ದ ತರುಣ ಶಿವಯೋಗಿ ಚೆನ್ನಬಸವಣ್ಣನ ಅನುಭವದ ವಾಣಿಯನ್ನು ಆಲಿಸಲು ಆತುರ ಎಲ್ಲರಿಗೂ! ಈ ಕಾರ್ಯಕ್ರಮವನ್ನು ನಿನ್ನೆಯೇ ಸಾರಲಾಗಿತ್ತು ಹಿರಿ ಹಿರಿಯ ಅನುಭವಿಗಳೂ ವೇದಿಕೆಯ ಹತ್ತಿರ ಸಮ್ಮಿಲಿತರಾಗಿದ್ದರು. ಅಷ್ಟ ರಲ್ಲಿ ಮಹಾದ್ವಾರವನ್ನು ಪ್ರವೇಶಿಸಿದ ನಾಗಲಾಂಬೆ, ನೀಲಾಂಬೆ, ಗಂಗಾಂಬೆ ಯರು ಶರಣೆಯರ ಗುಂಪಿನ ಕಡೆಗೂ ಬಸವೇಶ-ಚೆನ್ನಬಸವೇಶ್ವರರು ಶರಣರ ಕಡೆಗೂ ಬಂದರು. ಎಳೆಯ ಮೀಸೆಯ ... ಶಿವಯೋಗಿ

ಚೆನ್ನಬಸವಣ್ಣನು ಬಾಗಿದ ತಲೆಯು, ಮುಗಿದ ಕೈಯುವನಾಗಿ ಮಾವನ ಮುಂದೆ ಬರುತ್ತಿದ್ದಾಗ ಶಿವಕಳೆ ಸ್ಫುರಿಸುವಂತಿದ್ದ ಅವನ ಕಣ್ಣುಗಳನ್ನು ವಿಶಾಲವಾದ ಹಣೆಯನ್ನು ಕಂಡು ಮುಗ್ಧವಾದ ಗಣತತಿ 'ಉಘೇ, ಉಘೇ' ಎಂದು ಉದ್ಘೋಷಿಸಿ ಆದರದಿಂದ ಸ್ವಾಗತಿಸಿತು. ಹಲವರು ತಮ್ಮ ಹತ್ತಿರ ಬಂದ ಬಂದಂತೆ ಎದ್ದು ಕೈಮುಗಿಯುತ್ತಿದ್ದರು. ಚೆನ್ನಬಸವಣ್ಣ ಅವರ ಅಡಿಗೆ ಮತ್ತಿಪ್ಪು ಬಾಗುತ್ತ ಮುಂದೆ ಬರುತ್ತಿದ್ದನು. ಹಿರಿಯ ಶರಣ ಸೊಡ್ಡಳ ಬಾಚರಸರು ಎದ್ದು ಮುಂದೆ ಬಂದು ಆತನ ಕೈಹಿಡಿದು ತಮ್ಮ ಹತ್ತಿರ ಕುಳ್ಳಿರಿಸಿಕೊಂಡರು. ನಿಯಮಿತ ಪ್ರಾರ್ಥನೆ ಮೌನಧ್ಯಾನಗಳು ನಡೆದ ನಂತರ ಅಂದಿನ ಪ್ರವಚನ ಕಾರ್ಯಕ್ರಮಗಳ ಕ್ರಿಯಾಮೂರ್ತಿಯಾಗಿ ಸೊಡ್ಡಳ ಬಾಚರಸರ ಆಯ್ಕೆಯಾಯಿತು. ಆ ಮಹಾನುಭಾವರು ಪೀಠದ ಹತ್ತಿರ ಬಂದು, ತಾವು ಬಸವಣ್ಣನವರಿಂದ ಕೇಳಿದಂತೆ, ಚೆನ್ನಬಸವಣ್ಣನ ಬಾಲ್ಯದಲ್ಲಿಯೇ ವಿಶ್ವ ವ್ಯವಹಾರವನ್ನು ಚಿಕಿತ್ಸಕನಾಗಿ ನೋಡುತ್ತಿದ್ದುದನ್ನು, ತರ್ಕಅನುಮಾನಗಳಿಂದ ವಿಶ್ಲೇಷಿಸುತ್ತಿದ್ದುದನ್ನು, ಈಗ ವಿದ್ಯಾಪೀಠದ ಜ್ಯೋತಿಯಾಗಿ ಕೀರ್ತಿವೆತ್ತು ಹೊರಬಂದುದನ್ನು ಸ್ವಲ್ಪದರಲ್ಲಿ ವಿವರಿಸಿದರು. ಬಳಿಕ ಚೆನ್ನಬಸವಣ್ಣನವರು ಅಪ್ಪಣೆಕೊಡಿಸಬೇಕೆಂದು ಕೋರಿದರು.

ಚೆನ್ನಬಸವಣ್ಣ ನೀಟಾಗಿ ಕುಳಿತು ವಚನಗೀತ ಹಾಡಿದನು.

"ಓಂಕಾರದಿಂದತ್ತತ್ತ, ನಾದಬಿಂದು ಕಳೆಗಳಿಂದತ್ತತ್ತ,
ಪ್ರಥಮಾಚಾರಿ ನೀನೇ ಲಿಂಗಾಚಾರಿ ನೀನೇ
ಜಂಗಮಾಚಾರಿ ನೀನೇ ಪ್ರಸಾದಾಚಾರಿ ನೀನೇ!
ಎನಗೆ ಸರ್ವಾಚಾರಿಯೂ ನೀನೇ ಅಯ್ಯಾ !
ಇದು ಕಾರಣ, ಕೂಡಲ ಚೆನ್ನಸಂಗಯ್ಯಾ
ಆವ ವರ್ಣವಿಲ್ಲದಂದು 'ಓಂನಮಃ ಶಿವಾಯ' ಎನುತಿರ್ದೆನು"

ಬಳಿಕ ಮೂಲಸ್ಥಲವನ್ನು ಧ್ಯಾನಿಸಿ ಕೈಮುಗಿದು: "ಕೂಡಲಚೆನ್ನ ಸಂಗಯ್ಯನ ಶರಣರಿಗೆ ಶರಣು ಶರಣಾರ್ಥಿ ನಿಮ್ಮ ಕರುಣೆಯ ಕೂಸು ನಾನು. ನಾನೇನು ಬಲ್ಲೆ ಅನುಭಾವವ?

'ಅನು ಶುದ್ಧ ಧವಳಿತನು, ಎನಗೆ ಅನಾದಿ ಬಂದು
ಹೊದ್ದಿದ ಕಾರಣವೇನಯ್ಯಾ?
ಜಗವ ಮೊಗೆಯಲು ಬಂದೆನೇಕಯ್ಯಾ?
ಗಿಡುವ ಹರಿಯಲು ಬಂದೆನೇಕಯ್ಯಾ?
ಎಲ್ಲರ ನಡುವೆ ಕುಳ್ಳಿರ್ದು ಗೀತವ ಹಾಡಲು ಬಂದೆನೇಕಯ್ಯಾ?
ಚೆನ್ನಬಸವಣ್ಣನೆಂಬುದು ಶಬ್ದವೇಕಯ್ಯಾ, ಕೂಡಲಚೆನ್ನ ಸಂಗಯ್ಯಾ?

ನಾವು ಸಂಕುಚಿತ ವಿಚಾರದಿಂದ ನಾನಾಪರಿಯ ದುಃಖಕ್ಕೀಡಾಗುತ್ತಿದ್ದೇವೆ. ನಮ್ಮ ನಿಜಸ್ವರೂಪದ ಅರಿವು ನಮಗಿಲ್ಲ. ಈ ದೇಹ ಬಂದುದೇಕೆ? ಈ ವಿಶ್ವದ ಭೋಗವನ್ನೇಕೆ ಪಡೆಯುತ್ತೇವೆ? ನನ್ನನನ್ನದೆಂದು ಕಿತ್ತುಕೊಂಡಲು ಏಕೆ ಯತ್ನಿಸುತ್ತೇವೆ? ಈ ಆಟವೇಕೆ? ಅವನು ಇವನು ಎಂದು 'ಭೇದ ಭಿನ್ನತೆ'ಗಳ ಸಂಕೇತವೇಕೆ? ಇದರಿಂದ ಶಾಂತಿಸುಖವಿದೆಯೇ? ಹೇಗಿದ್ದೀತು? ಇಲ್ಲ. ಸರ್ವಜಗತ್ತಿಗೆ ಒಡೆಯನಾಗಿರುವ ತತ್‌ಸ್ವರೂಪವಾಗಿರುವ ಲಿಂಗದ ಅರಿವು ನಮಗಾಗಬೇಕು, ಲಿಂಗಾರಾಧಕರಾದ ಶುದ್ಧಶೈವ, ಪಾಶುಪತ, ಕಾಳಾಮುಖಾದಿ ಶೈವರುಗಳೂ ಆತ್ಯಂತಿಕ ಶಾಂತಿಯನ್ನು ಹೊಂದಿರುವದಿಲ್ಲ, ಧಾರ್ಮಿಕ ಕ್ಷೇತ್ರದಲ್ಲಿಯ ದೇವಮಂದಿರಗಳು ವೈದಿಕವಿದ್ಯಾಲಯಗಳು ಅಜ್ಞಾನಿಗಳ ಜೀವನದಲ್ಲಿ ಅಲ್ಲದ ಆಟವಾಡುತ್ತಲಿವೆ. ಅವುಗಳ ಅಧಿಪತಿಗಳು ಅವರ ಶೋಷಣೆ ಮಾಡಿ, ತಮ್ಮ ವಿಲಾಸ ಜೀವನಕ್ಕೆ ಮಾರ್ಗಮಾಡಿಕೊಳ್ಳುತ್ತಿದ್ದಾರೆ. ಇವರ ಪಾಂಡಿತ್ಯವೆಲ್ಲ ಹೊಟ್ಟೆಯ ಮೇಲೆ ಕಟ್ಟೋಗರವ ಕಟ್ಟಿಕೊಂಡಂತಿದೆ. ತಮ್ಮ ಹಸಿವೆ ಹಿಂಗಲಿಲ್ಲ. ಹಿಂಗಿ ಆಪ್ಯಾಯನವಾಗಲಿಲ್ಲ. ಇನ್ನೊಬ್ಬರಿಗೆ ಉಣ್ಣಲೂ ದೊರೆಯುವಂತಿಲ್ಲ. ವರ್ಣವ್ಯವಸ್ಥೆಯಿಂದ ಕುಲಜಾತಿಗಳನ್ನು ಕಲ್ಪಿಸಿ ಮೇಲು ಕೀಳು ಭಾವನೆ ಬೆಳೆಸಿ ತಮ್ಮ ಪ್ರತಿಷ್ಠೆ ಮೆರೆಯುತ್ತಾರೆ, ನಿಜಕ್ಕೂ ಅದು ಆತ್ಮೋನ್ನತಿಯೂ ಅಲ್ಲ. ಲೋಕ ಕಲ್ಯಾಣವೂ ಅಲ್ಲ.

'ಗುರುಹಸ್ತದೊಳು ಪುನರ್ಜಾತನಾದ ಭಕ್ತನಲ್ಲಿ
ಆವ ಜನ್ಮಜಾತಿಯ ಬೆದಕಲಹುದು?
ಅದೆಲ್ಲ ಪ್ರಾಕೃತರಿಗಲ್ಲದೆ, ಅಪ್ರಾಕೃತರಿಗುಂಟೇ ಹೇಳಾ?
ನಿಮ್ಮ ಶರಣರಲ್ಲಿ ಜಾತಿಯ ಹುಡುಕುವ ಕಡುಪಾತಕಿಗಳ
ಎನ್ನತ್ತ ತೋರದಿರಯ್ಯಾ ಕೂಡಲಚೆನ್ನಸಂಗಮದೇವಾ'

ಎನ್ನುತ್ತಿದ್ದೇನೆ. ಶಿವಾಗಮಗಳಲ್ಲಿಯ ಷಟ್‌ಸ್ಥಲ ನಿರೂಪಣೆಯಲ್ಲಿಯೂ ಕುಲವರ್ಣಗಳು ತೂರಿಬಂದಿವೆ. ಆದರಿಂದ ಅದುವೆ ಮಾಯೆಯಾಗಿ ಮರವೆಯ ಪರೆಯನ್ನು ಸುತ್ತಿದೆ, ಶಿವಭಕ್ತಿಯಿಂದಲೇ ಅದನ್ನು ಹರಿಯಬೇಕು. 'ಭಕ್ತನೊಂದು ಕುಲ, ಭವಿಯೊಂದು ಕುಲ' ಎಂದು ಅರಿಯಬೇಕು. ಷಟ್‌ಸ್ಥಲ ಪಥವು ನಿಜಪಥವಾಗುವಂತೆ ಲಿಂಗಪಥವಾಗುವಂತೆ, ಅದನ್ನು ರೂಪಿಸಿ ಅನುಷ್ಠಾನ-ಅನುಸಂಧಾನ ಅನುಭಾವಗಳಿಂದ ನಿರ್ಣಯಿಸಿ, ಪರಿಷ್ಕರಿಸಿ, ಸಿದ್ಧಗೊಳಿಸಬೇಕು. ಅದು ಭಕ್ತನನ್ನು ನಿರಾಲಂಬದತ್ತ ಒಯ್ಯುವ ವಿಶುದ್ಧ ಸಾಧನಮಾರ್ಗವಾಗುವದು, ಕೂಡಲಚೆನ್ನಸಂಗಯ್ಯನ ಶರಣರು ನೀವು ಮಾತ್ರ ಪರಮಾನಂದ ಭರಿತರಾದರೆ ಆಗದು, ನೀವು ಎಲ್ಲರು ಆ ಸಿದ್ಧಾಂತವನ್ನು ಸಿದ್ಧಗೊಳಿಸಿ,

ಭವದಿ ಬಳಲುವ ಜೀವಾತ್ಮರ ಉದ್ಧಾರಕ್ಕೆ ದಾರಿತೋರಬೇಕು. ನಾನು ಹಸುಳೆ, ನಿಮ್ಮಡಿಯ ಸೇವ . ಸೇವೆ ಮಾಡುವೆ, ಈ ಧರ್ಮ ಸಿದ್ಧಾಂತದ ನಿರ್ಮಾಣಕ್ಕೆ ಆದಿಗುರು ಬಸವಣ್ಣನವರ ನಡೆನುಡಿಗಳು ಪ್ರತ್ಯಕ್ಷ ಪ್ರಮಾಣಗಳು! ಯಾಕೆಂದರೆ ಅವರು ಸರ್ವಾಚಾರಸಂಪನ್ನರು, ಅವರು ಕಾಣ ದುದಿಲ್ಲ, ತಿಳಿಯದುದಿಲ್ಲ.

'ನಿರಾಲಂಬದಲ್ಲಿ ನಿಜಲಿಂಗ ನಾನೆ' ಎಂಬ ಮಹದಹಂಕಾರವೇ
ಸಂಸಾರವಾಗಿ ಬಂದು ಬಳಲಿಸುವ ಭ್ರಾಂತು,
ಇನ್ನಾರಿಗೆ ತಿಳಿಯುವದಯ್ಯಾ?
ಇನ್ನಾರು ಪರಿಹರಿಸುವರಯ್ಯಾ ಬಸವಣ್ಣನಲ್ಲದೆ?
ಇದು ಕಾರಣ ಬಸವಣ್ಣನ ಶ್ರೀಪಾದವ ತೋರಿ
ಬದುಕಿಸಯ್ಯಾ ಕೂಡಲಚೆನ್ನಸಂಗಮ ದೇವಾ'

ಎಂದು ನಂಬಿ ನಾನು ಬೇಡುತ್ತಿದ್ದೇನೆ. ನಮ್ಮ ಸಿದ್ಧಾಂತಗಳನ್ನು ಪರಿಶೀಲಿಸಿ ನಿರ್ಣಯ ಮಾಡಲು ನಮ್ಮಗೋಷ್ಠಿಗೆ ಜ್ಞಾನಸೂರ್ಯನೊಬ್ಬನ ಉದಯ ವಾಗುವದೆಂದು ನಂಬಿಗೆ ನನಗಿದೆ. ಆದಿಅನಾದಿ, ಆತ್ಮವಿವೇಕ . ಅನುಭಾವ ಸಂಬಂಧ ಎಂತಿಪ್ಪುದೆಂದಡೆ:

'ಆದಿಯೇ ದೇಹ, ಅನಾದಿಯೆ ಆತ್ಮ.
ಇಂತೀ ಆದಿ ಅನಾದಿಯ ಮೇಲಿಪ್ಪುದೇ ಪರಮಪ್ರಣವ.
ಆ ಪರಮಪ್ರಣವದ ಪರಮಪ್ರಕಾಶವೆ ಚಿಚ್ಛಕ್ತಿ.
ಆ ಚಿಚ್ಛಕ್ತಿಯ ಸುವರ್ಣಪ್ರಭೆಯ ಮೇಲಣ
ಪರಮ ನಾದವೆ ಸುನಾದಬ್ರಹ್ಮ!
ಆ ಬ್ರಹ್ಮದ ಮೇಲಿನ ಸೂಕ್ಷ್ಮಲಿಂಗವೆ
ನಾದಬಿಂದುಕಳಾತೀತವಾದ ಜ್ಯೋತಿರ್ಮಯ ಲಿಂಗ
ಆ ಲಿಂಗದಿಂದೊಗೆದ ದೇಹೇಂದ್ರಿಯ ಮನಃಪ್ರಾಣಾದಿಗಳೆಲ್ಲ
ಆ ಲಿಂಗದ ಉಪಕರಣಗಳಾದ ಕಾರಣ.
ಆ ಮನಃಪ್ರಾಣಾದಿಗಳೆಲ್ಲ ಪರಮವಸ್ತುವಿಗೆ ಭಿನ್ನವೆಂಬ
ಅಜ್ಞಾನಿಯ ಮೆಚ್ಚ ಕೂಡಲಚೆನ್ನಸಂಗಮದೇವ'

ಈ ಬಗೆಯ 'ತನ್ನರಿವು ತನಗಿದ್ದರೆ ತನಗೆ ತಾನೆ ಕೆಳೆ, ಇಲ್ಲದಿದ್ದರೆ ತನಗೆ ತಾನೆ ಹಗೆ' ಹಗೆ ಕೆಳೆ ಹೊರಗಲ್ಲ, ಹೊರಗಿಲ್ಲ; ದುಃಖದುಮ್ಮಾನ ಗಳು ಬೇರೆಡೆಯಿಲ್ಲ. ಶರಣು ಶರಣಾರ್ಥಿ"

ಉತ್ಸಾಹದಿಂದ ಜಯಘೋಷಮಾಡಿ, ಕರತಾಡನ ಮಾಡಿತು ಶರಣ ಸಂದೋಹ! ಚೆನ್ನಬಸವಣ್ಣನ ಮಾತಿನಲ್ಲಿ ಅತಿ ವಿಶ್ವಾಸದ ಅಧಿಕಾರವಿದ್ದಿತು.

ಸ್ಪಷ್ಟತೆಯಿದ್ದಿತು, ಧಿಟ್ಟತನವಿದ್ದಿತು, ಸೊಡ್ಡಳರು ಎದ್ದುಬಂದು ಅವನನ್ನು ಅಪ್ಪಿಯೇ ಬಿಟ್ಟರು, ತಮ್ಮ ಪೀಠದಲ್ಲಿಯೇ ಕುಳ್ಳಿರಿಸಿಕೊಂಡರು. ತರುಣ ಶಿವಯೋಗಿಯ ವಾಣಿ, ವಿನಯ, ವಿದ್ಯೆ, ಜ್ಞಾನ, ಅನುಭಾವಗಳನ್ನು ಶರಣರು ತಮ್ಮ ತಮ್ಮಲ್ಲಿಯೇ ಕೊಂಡಾಡುತ್ತಿರಲು, ಸೊಡ್ಡಳಬಾಚರಸರು 'ಸಾವಿರ ಸಾವ ದೇವರ ಆರಾಧಿಸದೆ ಲಿಂಗದ ನಿಲವನರಿದು ಉಪಾಸಿಸುವದು ಸೂಕ್ತವೆಂದು ಹೇಳಿ ಚೆನ್ನಬಸವಣ್ಣನ ಉಪನ್ಯಾಸಕ್ಕೆ ಪುಷ್ಟಿಯನ್ನು ಕೊಟ್ಟರು, ಗೋಷ್ಠಿಯ ಮಂಗಲದ ನಂತರ ಹಿರಿಯ ಶರಣರು ಅಲ್ಲಿಯೇ ಕುಳಿತು ವಿಚಾರಿಸಿ ಚೆನ್ನಬಸವಣ್ಣನನ್ನು 'ಅನುಭವ ಮಂಟಪದ ಕಾರ್ಯದರ್ಶಿಯಾಗಿ ಕಾರ್ಯಕ್ರಮಗಳ ವ್ಯವಸ್ಥೆ ಮಾಡಬೇಕು' ಎಂದು ಕೇಳಿಕೊಂಡರು. ಚೆನ್ನಬಸವಣ್ಣನು ಸಂತೋಷದಿಂದ ಒಪ್ಪಿ ಆ ಕಾರ್ಯಕ್ಕೆ ಕೊಂಡನು.

§ § § §

ವಿಲಾಸಿಯಾಗಿದ್ದ ಚಾಲುಕ್ಯಚಕ್ರವರ್ತಿ ತೈಲಪನು ನಿಧನಹೊಂದಿದನು. ಅವನ ಪರವಾಗಿ ಸರ್ವಾಧಿಕಾರಿಯಾಗಿ ರಾಜ್ಯವಾಳುತ್ತಿದ್ದ ಬಿಜ್ಜಳನು, ಈಗ ತೈಲಪನ ವಂಶದವರನ್ನೂ ದೂರಮಾಡಿ ರಾಜ್ಯವನ್ನೇ ಅಪಹರಿಸುವ ಎತ್ತುಗಡೆ ನಡೆಸಿದನು. ಇದು ನ್ಯಾಯನಿಷ್ಠುರ ಬಸವಣ್ಣನವರಿಗೆ ಸರಿಯೆನಿಸಬಹುದೇ? ಸಾಧ್ಯವಿಲ್ಲ. ಇದರಿಂದ ಅವರಿಬ್ಬರಲ್ಲಿ ವೈಮನಸ್ಸಿಗೆ ಆರಂಭವಾಯಿತು. ಬಸವಣ್ಣನವರ ವಿಷಯದಲ್ಲಿ ಮತ್ಸರಪಡುತ್ತಿದ್ದ ಮಂತ್ರಿಗಳೂ ಇದ್ದರು. ಸ್ವಾರ್ಥಕ್ಕಾಗಿ ಬಿಜ್ಜಳನು ಅವರನ್ನು ಪುರಸ್ಕರಿಸುತ್ತ ನಡೆದನು. ರಾಜಕೀಯವು ವಕ್ರಗತಿಗೊಂಡದ್ದರಿಂದ ಬಸವೇಶ್ವರರು,ತಮ್ಮನ್ನು ನಿವೃತ್ತಿಗೊಳಿಸಲು ಕೇಳಿಕೊಂಡರು.

ಒಂದು ದಿನ ಅರಮನೆಯ ಪಸಾಯಿತನೊಬ್ಬನು ಮಹಮನೆಗೆ ಬಂದು ದೊರೆಗಳು ಪ್ರವಾಸದಿಂದ ಬಂದ ತಮ್ಮ ಸೋದರಿಯರನ್ನು ಕಾಣಲು ಬರುವರು ಎಂದು ಹೇಳಿ ಹೋದನು. ಮುಂದೊಂದು ತಾಸಿನ ಮೇಲೆ ಬಿಜ್ಜಳನು ಮಹಮನೆಯ ಬಾಗಿಲಲ್ಲಿ ರಥದಿಂದಿಳಿದನು. ಒಳಗೆ ರಾಜ್ಯದಾಹದಿಂದ ಬೇಯುತ್ತಿದ್ದ ಬಿಜ್ಜಳನು ಹೊರಗೆ ಅದನ್ನು ತೋರಗೊಡದೆ ಹರ್ಷಚಿತ್ತನಂತೆಯೇ ಇರುತ್ತಿದ್ದನು. ತನ್ನ ದುರಾಶೆಯನ್ನು ಒಪ್ಪದಿದ್ದ ಬಸವರಾಜರನ್ನೂ, ಅವರ ಅಸಂಖ್ಯಾತ ಅನುಯಾಯಿಗಳನ್ನೂ ಎದರು ಹಾಕಿ ಕೊಳ್ಳುವದು ಅವನಿಗೆ ಬೇಕಾಗಿರಲಿಲ್ಲ. ಇದಲ್ಲದೆ ಮಹಿಮಾಶಾಲಿಯಾದ, ಬುದ್ಧಿವಂತನಾದ ಈ ಮಹಾವ್ಯಕ್ತಿಯನ್ನು ಅವಶ್ಯವಿದ್ದಾಗ ಉಪಯೋಗಿಸಿ ಕೊಳ್ಳಬೇಕೆಂದೂ ಬಗೆದಿದ್ದನು. ಆದ್ದ

ರಿಂದ ಬಸವಣ್ಣನವರ ಭಿನ್ನಾಭಿಪ್ರಾಯದ ಕಟುನುಡಿಗಳನ್ನು ನುಂಗಿಕೊಂಡು ಪ್ರಸನ್ನ ಚಿತ್ತನಾಗಿಯೇ ಬಂದಿದ್ದನು. ಬೇಕಾದಾಗ ಬಣ್ಣ ಬದಲಿಸಲು ಅವನು ಪಳಗಿದ ಕೈಯಾಗಿದ್ದನು.

ಬಸವೇಶ್ವರ, ಸಕಲೇಸಮಾದರಸು, ಮಾಚಯ್ಯ, ಬಿಜ್ಜಳನನ್ನು ಮಹಾ ದ್ವಾರದಲ್ಲಿ ಸ್ವಾಗತಿಸಿದರು ಬಿಜ್ಜಳನು ಅವರೊಡನೆ ಮಾತನಾಡುತ್ತ ಅಂಗಳದಲ್ಲಿ ಹಾಯ್ದು ಬಸವಣ್ಣನವರ ವಾಸಗೃಹಕ್ಕೆ ಬಂದನು, ಅಲ್ಲಿ ಅಕ್ಕನಾಗಮ್ಮ ಚೆನ್ನ ವಸವಣ್ಣ ಕೈಮುಗಿದು ಬರಬೇಕು. ಎಂದರು ಪ್ರತಿಯಾಗಿ ಕೈಮುಗಿದು ಬಿಜ್ಜಳನು

"ಶರಣು ಅಕ್ಕಾಜಿ, ಓ ಚಿಕ್ಕದಣ್ಣಾಯಕರು! ನಿಮ್ಮ ಪ್ರಯಾಣ ನಿರಾತಂಕ ವಾಗಿತ್ತೇ?"

"ತಮ್ಮ ರಾಜ್ಯದಲ್ಲಿ ಆತಂಕವೆಂದರೇನು? ಪ್ರಭು ಅದೇನೋ ಬೇರೆ ಹೆಸರು ಅಪ್ಪಣೆಕೊಡಿಸಿದಿರಲ್ಲಾ?" ಚೆನ್ನಬಸವಣ್ಣ ಕೇಳಿದನು.

"ಅದು ನಮ್ಮ ಎಣಿಕೆ! ಹೇಳುತ್ತೇನೆ ಬನ್ನಿ" ಎಂದು ನಗುತ್ತ ಒಳಗೆ ಬಂದು ರಾಜನು ಆಸನದಲ್ಲಿ ಕುಳಿತನು. ಮಾತು ಮುಂದುವರಿಸಿದನು.

"ಬಳ್ಳೇಗಾಂವಿಯಲ್ಲಿ ಸೋವಿ ದೇವನ ಅಭ್ಯಾಸಕ್ರಮ ಹೇಗಿತ್ತು?"

"ಚೆನ್ನಾಗಿಯೇ ಇತ್ತು . ಅವರು ಒಳ್ಳೆಯ ಅವಧಾನಿಗಳು! ಆದರೆ ರಾಜ ಕುಮಾರರು ಧರ್ಮಶಾಸ್ತ್ರ ಓದಿ, ಧರ್ಮಬೋಧೆ ಮಾಡಬೇಕಾಗಿಲ್ಲವಲ್ಲ. ತಾವು ಅವರನ್ನು ರಾಜಕೀಯ ಮತ್ತು ಶಸ್ತ್ರಾಭ್ಯಾಸಕ್ಕಾಗಿ ಗೋವೆಯ ವಿದ್ಯಾಲ ಯಕ್ಕೆ ಕಳಿಸಿದ್ದು ಉಚಿತವೇ ಆಯಿತು."

"ಹಾಗೆಂದು ಕಳಿಸಿದ್ದೇವೆ ಮಾತ್ರ! ಅಲ್ಲಿ ಅವನೇನು ಮಾಡುತ್ತಾನೋ ತಿಳಿಯದು. ರಾಜಕೀಯವನ್ನು ಧರ್ಮಶಾಸ್ತ್ರದಿಂದ ಬೇರೆಯಾಗಿ ತಿಳಿದು ನಾವು ಇದುವರೆಗೆ ತಪ್ಪಿದ್ದೇವೆ. ನ್ಯಾಯವಾದ ಆಡಳಿತಕ್ಕೆ ಧರ್ಮಶಾಸ್ತ್ರವೇ ಆಧಾರ! ಅಂತೆಯೇ ನಾವು ನಿನ್ನನ್ನು ಬಿಡಬಾರದೆಂದಿದ್ದೇವೆ. ನಿಮ್ಮ ಮಾವನವರ ಕಾರ್ಯ ಭಾರವನ್ನು ಕಡಿಮೆಮಾಡುವದಕ್ಕಾಗಿ ನಿನ್ನನ್ನು ಚಿಕ್ಕದಂಡನಾಯಕ ನೆಂದು ನೇಮಿಸಿಕೊಳ್ಳಬೇಕೆಂದಿದ್ದೇವೆ."

"ನನ್ನ ಸಂಕಲ್ಪದ ಕರ್ತವ್ಯವೇ ಬೇರೆಯಾಗಿದೆ ಪ್ರಭು! ತತ್ತ್ವಶಾಸ್ತ್ರ ಸಂಯೋಜನೆಯ ಕಾರ್ಯವದು."

"ಆಗಲಿ, ಎರಡನ್ನೂ ಮಾಡಬಹುದಲ್ಲ."

ಅಷ್ಟರಲ್ಲಿ ಗಂಗಾಂಬೆ-ನೀಲಾಂಬೆಯರು ಕೋಣೆಯಿಂದ ಬಂದು ಅಣ್ಣ ನಾಗಿದ್ದ ಬಿಜ್ಜಳನಿಗೆ ನಮಸ್ಕರಿಸಿದರು. ಅವರೊಡನೆ ಹೊರಗೆ ಬಂದ ಪುಟ್ಟ ಬಾಲ ಸಂಗಯ್ಯ ಚೆನ್ನಬಸವಣ್ಣನನ್ನ ಅಪ್ಪಿಕೊಂಡನು. ರಾಜನನ್ನು ನೋಡ

ಹತ್ತಿದನು. 'ಓ ಮಾಮಾಜಿ ಬಂದಿದ್ದಾರೆ, ಅವರಿಗೆ ಶರಣು ಮಾಡು ಸಂಗಯ್ಯಾ' ಎಂದು ಚೆನ್ನಬಸವಣ್ಣ ಹೇಳುತ್ತಿರಲು ಆತ ಕೈ ಜೋಡಿಸುತ್ತಿದ್ದನು. ಬಿಜ್ಜಳನು ಎದ್ದು ಮುಂದೆ ಬಂದು ಅವನನ್ನು ಎತ್ತಿ ಮುದ್ದಾಡಿ ಕೆಳಗಿಳಿಸಿದನು. ಬಳಿಕ ಸೋದರಿಯರೊಡನೆ ಕುಶಲವಾರ್ತೆಗಳನ್ನಾಡಿ ಹೊರ ಬಂದನು. ಅಂಗಳದಲ್ಲಿ ಮಾತಾಡುತ್ತ ನಿಂತಿದ್ದ ಬಸವೇಶ್ವರ ಮುಂತಾದವರು ಅವನತ್ತ ಬಂದರು. ಎಲ್ಲರೂ ಸಂದರ್ಶನ ಮಂದಿರದ ಕಡೆಗೆ ನಡೆದರು.

ಅನುಭವ ಮಂಟಪದ ಅಂಗವಾಗಿ ನಡೆಯುತ್ತಿದ್ದ ಕಾರ್ಯಕಲಾಪಗಳನ್ನು ಚೆನ್ನಬಸವಣ್ಣನು ಬಿಜ್ಜಳನಿಗೆ ತೋರಿಸುತ್ತ ವಿವರಿಸುತ್ತ ನಡೆದಿದ್ದನು. ಗ್ರಂಥಭಾಂಡಾರದಲ್ಲಿ ಓಲೆಯ ಶಾಂತಯ್ಯನವರ ಹಿರಿಯತನದಲ್ಲಿ ಎಂಟು ಜನ ಲಿಪಿಕಾರರು ವಚನಗಳ ಪ್ರತಿಮಾಡುತ್ತಿರುವದನ್ನು ನೋಡಿದರು. ಅದರಾಚೆಯ ಎದರು ಬದರು ಪಡಸಾಲೆಗಳುಳ್ಳ ವಿಶಾಲ ಮಂದಿರದಲ್ಲಿ ಜಟಾಮುಕುಟರೂ, ವಿಭೂತಿರುದ್ರಾಕ್ಷಿ-ಕಾವೀವಸ್ತ್ರಧಾರಕರೂ ಆದ ನೂರಾರು ಸಾಧಕರು ಸಾಲಾಗಿ ಹಾಸಿದ ಕಂಬಳಾಸನಗಳ ಮೇಲೆ ಕುಳಿತಿದ್ದರು. ಅವರ ಮುಂದಿನ ಮಣೆಯಮೇಲೆ ತಾಡದೋಲೆಯ ಕಟ್ಟುಗಳಿದ್ದವು. ಕೆಲವರು ಓದುತ್ತಿದ್ದರು; ಕೆಲವರು ಬರೆಯುತ್ತಿದ್ದರು; ಮೆಲ್ಲಗೆ ಚರ್ಚಿಸುತ್ತಲೂ ಇದ್ದರು. ತಲೆಬಾಗಿಲದೊಳಗೆ ಬಿಜ್ಜಳದೊರೆ ಬಂದಾಗ ಅವರೆಲ್ಲ ಎದ್ದು 'ಶರಣು ಶರಣಾರ್ಥಿ' ಎಂದರು. ಬಿಜ್ಜಳನು ಪ್ರತಿಯಾಗಿ ಕೈಮುಗಿದು ಕುಳ್ಳಿರಲು ಸೂಚಿಸಿದನು.

"ಇವರೆಲ್ಲ ಏನು ಮಾಡುತ್ತಾರೆ ಚೆನ್ನಬಸವಣ್ಣಾ ?"

"ಇವರೆಲ್ಲ ಪರಮಾರ್ಥ ಸಾಧಕರು; ಕೆಲವರು ತತ್ತ್ವಾನ್ವೇಷಕರೂ ಇದ್ದಾರೆ. ಧರ್ಮಶಾಸ್ತ್ರಗಳ ಬಗೆಗೆ ವಿವೇಚನೆ ಮಾಡುತ್ತಾರೆ. ತಮ್ಮ ಭಾವಾನುಸಂಧಾನದಿಂದ ಹೊಳೆದ ವಚನಗಳನ್ನು ಬರೆಯುತ್ತಾರೆ."

ಬಿಜ್ಜಳನು ಹೊರಳಿ ಬಸವರಾಜರನ್ನು ನೋಡಿ ಫಕ್ಕನೆ ನಕ್ಕನು. ಯಾರಿಗೂ ಆ ನಗೆಯ ಅರ್ಥವಾಗಲಿಲ್ಲ. ಮುಂದಾಗಿದ್ದ ಚೆನ್ನಬಸವಣ್ಣನು ರಾಜನನ್ನು ಸಂದರ್ಶನ ಮಂದಿರಕ್ಕೆ ಕರೆದೊಯ್ದನು. ಅಲ್ಲಿ ಸಕಲೇಶ ಮಾದರಸ ದೊರೆಯನ್ನು ಸ್ವಾಗತಿಸಿ ಅಗ್ರಾಸನದಲ್ಲಿ ಕುಳ್ಳಿರಿಸಿದನು. ಬಿಜ್ಜಳನೇ ಮಾತನಾರಂಭಿಸಿದನು.

"ಬಸವರಸರೆ, ನೀವು ನಿವೃತ್ತಿಯನ್ನು ಬಯಸಿದ್ದೀರಿ. ಸಾಮ್ರಾಜ್ಯ ಸೇವೆಯಿಂದ ನೀವು ಹಿಂದೆ ಸರಿಯಬೇಕೆಂದಿದ್ದರೂ ನಾವು ನಿಮ್ಮನ್ನು ಬಿಡುವದರಲ್ಲಿ ನಮಗೆ ಸಂತೋಷವೆನಿಸುವದಿಲ್ಲ. ನೀವು ರಾಜ್ಯಕ್ಕೆ ಮಾಡಿರು

ಉಪಕಾರವನ್ನು ಸ್ಮರಿಸಿ ಪ್ರಭುತ್ವವು ನಿಮಗೆ ವಿರಾಮವೇತನ ನೀಡುವದು. ದಂಡನಾಯಕ ಪದವಿಯು ನಿಮಗೆ ನಿರಂತರ ನಡೆಯುವದು. ಮಂತ್ರಿಮಂಡಳದಲ್ಲಿ ಗೌರವಸದಸ್ಯರಾಗಿ ಉಳಿಯುವಿರಿ......"

"ಪ್ರಭುಗಳ ಕರುಣೆಯ ಕೊಡುಗೆ ಸಂಗಮನಾಥನ ಭೃತ್ಯರಿಗೆ ಸಲ್ಲದು. ಅವರು ಕಾಯಕದಿಂದಲೇ ಜೀವಿಸಬೇಕು"

"ನಿಮ್ಮ ಕಾಯಕದ ಈ ನಿತ್ಯಮತವನ್ನು ನಾನು ಬಲ್ಲೆನು. ಆದರಿಂದಲೇ ನಿಮ್ಮಿಂದ ನಿಮಗೆ ಹೊರೆಯಾಗದಷ್ಟು ರಾಜಸೇವೆಯನ್ನು ಪಡೆಯಲಿದ್ದೇವೆ. ಮಹತ್ವದ ಸಮಸ್ಯೆಗಳ ಕಾಗದಪತ್ರಗಳನ್ನು ಮಾತ್ರ ನಿಮ್ಮ ಕಡೆಗೆ ಕಳಿಸಲಾಗುವದು. ಅವಲೋಕಿಸಿ ಅವುಗಳಿಗೆ ನಿಮ್ಮ ಅಭಿಪ್ರಾಯವನ್ನು ಬರೆದು ಕಳಿಸಬೇಕು. ಅಗತ್ಯವಾದರೆ ರಾಜಸಭೆಗಳಿಗೆ ನಿಮ್ಮನ್ನು ಬರಮಾಡಿಕೊಳ್ಳುವೆವು. ಆಗ ನೀವು ನಿಮ್ಮ ರಾಜಕೀಯ ಅನುಭವದ ಸಾರಾಸಾರ ವಿಚಾರದ ಸಲಹೆ ನೀಡಬೇಕು. ನಾವು ಅವುಗಳನ್ನು ಗ್ರಹಿಸಲಿ ಬಿಡಲಿ, ಆ ಯಾವ ಅಭಿಪ್ರಾಯಕ್ಕೂ ನಿಮ್ಮನ್ನು ಹೊಣೆಗಾರರೆಂದು ತಿಳಿಯುವದಿಲ್ಲ. ಇದು ಒಂದು ನಿಮ್ಮ ಕಾಯಕವೇ ಆಗಿರಲಿ. ಪ್ರಭುತ್ವದ ಗೌರವಧನವೇ ಆ ಕಾಯಕದ ಸಂಪಾದನೆ. ಯೋಗ್ಯರಾದವರನ್ನು ಸನ್ಮಾನಿಸುವದಕ್ಕೆ ರಾಜನು ಸ್ವತಂತ್ರನಾಗಿರುವನು. ಅದಕ್ಕೆ ಮಂತ್ರಿಮಂಡಳದ ನಿರ್ಣಯ ಬೇಕಾಗಿಲ್ಲ. ಅದನ್ನು ನಿರಾಕರಿಸುವದು ಪ್ರಭುತ್ವವನ್ನೇ ವಿರೋಧಿಸಿದಂತೆ!"

"ತಮ್ಮ ಮಾತಿನಿಂದ ನಾನು ಬಂಧಿತನಾಗುತ್ತಿದ್ದೇನೆ."

"ಬಂಧನವಲ್ಲ ಬಸವರಾಜರೆ, ರಾಜಕೀಯದ ಶಿಷ್ಟತೆಯಿದು"

"ತಮ್ಮ ಇಷ್ಟ"

"ಹಾಗೆ ಹೇಳಿರಿ. ಇನ್ನೊಂದು ವಿಷಯ! ಸಕಲೇಶ ಮಾದರಸರೆ, ನಿಮ್ಮ ಅಧ್ಯಕ್ಷತೆಯಲ್ಲಿ ಶರಣರು ನಿರ್ಣಯಿಸಿ ನಮಗೆ ಕಳಿಸಿದ ಮನವಿಯನ್ನು ಪರಿಶೀಲಿಸಿ ಈ ಅನುಭವಮಂಟಪದ ಧರ್ಮ ಪ್ರತಿಷ್ಠಾನವು ಕ್ರಮಬದ್ಧ ಸಂಸ್ಥೆಯೆಂದು ಒಪ್ಪಲಾಗಿದೆ. ರಾಜಮುದ್ರಾಂಕಿತವಾದ ಶಾಸನ ಪತ್ರವು ನಾಳೆಯೇ ನಿಮ್ಮ ಕೈಸೇರುವದು."

ಸಕಲೇಶ ಮಾದರಸರು ಎದ್ದು ನಿಂತು ಕೈಮುಗಿದು ಕೃತಜ್ಞತೆಯನ್ನು ಸೂಚಿಸಿದರು. ರೂಢಿಯ ಸತ್ಕಾರ ಸಲ್ಲಿಸಿಕೊಂಡು ರಾಜನು ಎದ್ದನು..

ಈ ರಾಜಮನ್ನಣೆಯಿಂದ ಅನುಭವ ಮಂಟಪದ ಕಾರ್ಯಕಲಾಪಗಳಿಗೂ ತತ್ತ್ವಬೋಧೆಗೂ ಆಚರಣೆಗೂ ಲೌಕಿಕವಾಗಿ ಗೌರವವೂ

ಶಕ್ತಿಯೂ ಪ್ರಾಪ್ತವಾದವು. ಈ ಅನುಕೂಲತೆಯಲ್ಲಿ ಚೆನ್ನಬಸವಣ್ಣನು ತನ್ನ ಜ್ಞಾನ ಚೇತನವನ್ನು ಉಪಯೋಗಿಸಿ ಕಂಡುಕೊಳ್ಳುವ ವಿಚಾರಗಳನ್ನು ಅನುಭವಮಂಟಪದಲ್ಲಿ ಚರ್ಚೆಗಿಟ್ಟು ಪುಟಕ್ಕೆ ಹಾಕಿ, ಷಟ್‌ಸ್ಥಲ ಸಿದ್ಧಾಂತದ ಸರ್ವಾಂಗರಚನೆ ಮಾಡಲು ಅನುವಾದನು. ಅನುಭವಮಂಟಪದ ಯೋಜನೆ ಚಾಲನೆಗಳನ್ನು ಚೆನ್ನಬಸವಣ್ಣ ವಹಿಸಿಕೊಂಡಿದ್ದರಿಂದ, ಬಸವಣ್ಣನವರಿಗೆ ಅಕ್ಕ ಮತ್ತು ಮಡದಿಯರೊಡನೆ ಮಹಮನೆಯ ಬಹುದೊಡ್ಡ ದಾಸೋಹ ಕಾರ್ಯವನ್ನು ಚ್ಯುತಿಯಿಲ್ಲದೆ ನಡೆಯಿಸಲು ಸಾಧ್ಯವಾಯಿತು. ಅವರ ಸತ್ಯ-ಸದಾಚಾರ ಸದ್ಭಕ್ತಿಗಳ ಬೆಳಕಿನಲ್ಲಿ, ನಿತ್ಯ ಸಹಸ್ರಾರು ಜನ ಜಂಗಮರು ಮಹಮನೆಯಲ್ಲಿ ಲಿಂಗಾರ್ಚನೆ ಪ್ರಸಾದ ಸೇವನೆ ನಡೆಸುವಂತಾಯಿತು. ಇದು ತನು-ಮನ-ಧನಗಳ ತ್ರಿವಿಧ ದಾಸೋಹವಾದರೆ ಅನುಭವಮಂಟಪ ಅದು ಜ್ಞಾನದಾಸೋಹವಾಯಿತು. ಸಿದ್ಧಸಂಸ್ಥೆಯಾಯಿತು. ಇದರಲ್ಲಿ ಜಾತಿಕುಲಗಳ ಭೇದವಿರಲಿಲ್ಲ. ಶಿವಭಕ್ತಿಪಥದಲ್ಲಿರುವವರೆಲ್ಲ ಒಂದೇ ಕುಲ! 'ಸಕಲಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು' ಎಂದು ಬಸವಣ್ಣನವರು ಸಾರಿದ್ದರು. ಕೀಳು ಕುಲದವರೆಂದು ವರ್ಣಧರ್ಮೀಯರಿಂದ ತುಳಿಯಲ್ಪಟ್ಟ ಜನಾಂಗದ ಹರಳಯ್ಯ-ಶಿವನಾಗಮಯ್ಯಗಳು ಅನುಭವಮಂಟಪದಲ್ಲಿ ಆತ್ಮಜ್ಞಾನ ಸಾಧಕರಾಗಿ ಪಾಲುಗೊಂಡಿದ್ದರು. ಶರಣರು ವಿಚಾರ ವಿನಿಮಯದಿಂದ ನಿರ್ಣಯಿಸಿ ಬೋಧಿಸಿದ ಕ್ರಾಂತಿಕಾರಿ ಧರ್ಮವು ಶರಣರಧರ್ಮ ಅಥವಾ ಪರಿಷ್ಕೃತ ವೀರಶೈವ ಧರ್ಮವಾಯಿತು.

---

## ೪. ಚಿನ್ಮಯಮೂರ್ತಿ

ಈ ಹಿಂದಿನ ಒಂದು ಸಂಗತಿ: ಕಾರ್ಯದರ್ಶಿಯಾದ ಮರುದಿನ ಚೆನ್ನಬಸವಣ್ಣ ತನ್ನ ಅನುಷ್ಠಾನಮಂದಿರದಲ್ಲಿ ತತ್ತ್ವಗ್ರಂಥಾವಲೋಕನದಲ್ಲಿದ್ದನು. ಬಾಲಜಂಗಮಮೂರ್ತಿಯೊಬ್ಬನು ಅವಸರದಿಂದ ಒಳಗೆ ಬಂದು 'ಅಯ್ಯನವರೆ, ಬಸವರಾಜರು ಬರುತ್ತಿದ್ದಾರೆ; ಇಲ್ಲಿಯೇ ಬಂದರು' ಎಂದನು. ಚೆನ್ನಬಸವಣ್ಣ ಅವರನ್ನು ಸ್ವಾಗತಿಸಲು ಎದ್ದರು. ಆದರೆ ಇದೇನು? ಬಸವಣ್ಣನವರೇ ಚೆನ್ನಬಸವೇಶ್ವರರ ಪಾದಗಳಿಗೆ ಪೊಡಮಡಲು ಭರದಿಂದ ಬಾಗಿ ಬಂದರು. ಚೆನ್ನಬಸವಣ್ಣನವರು ಚಟ್ಟನೆ ಸಿಡಿದು ಹಿಂದೆ ಸರಿದು ನಿಂತರು. ಮತ್ತು ಸಾವರಿಸಿಕೊಂಡು ಮಾವನವರ ಅಡಿಗಳಿಗೆ ಮುಡಿ[illegible]ಯಾಗಿ ಯತ್ನಿ

ಸಿದರು. ಬಸವಣ್ಣನವರು ಅದಕ್ಕೆ ಆಸ್ಪದಕೊಡದೆ ಅವರನ್ನು ಎತ್ತಿ ಅಪ್ಪಿ ಕೊಂಡರು. ಅನುಸರಿಸಿ ಬಂದ ಪರಿವಾರದವರು ಆಶ್ಚರ್ಯಪಟ್ಟರು. ಮಾವ ಅಳಿ ಯನ ಅಡಿಗೆ ಪೊಡಮಡುತ್ತಿರುವದೇಕೆ? ಯಾರು ಹಿರಿಯರು? ಯಾರು ಕಿರಿ ಯರು?

ಹಿಂದಿನ ದಿನದ ಅನುಭವಗೋಷ್ಠಿಯಲ್ಲಿ ಚೆನ್ನಬಸವಣ್ಣ ನೀಡಿದ ಸುಸೂಕ್ಷ್ಮ ತತ್ತ್ವನಿರೂಪಣೆಯನ್ನು ಕೇಳಿ, ಬಸವಣ್ಣನವರು ತಲೆದೂಗಿ ಹೆಮ್ಮೆಪ ಟ್ಟಿದ್ದರು. ಆದರೆ ತಮ್ಮನ್ನು ಸರ್ವಾಂಗಲಿಂಗಿ ಸರ್ವಾಚಾರ ಸಂಪನ್ನ ಎಂದೂ ತಮ್ಮ ನಡೆನುಡಿಗಳೇ ಸಿದ್ಧಾಂತಕ್ಕೆ ನಿದರ್ಶನಗಳೆಂದೂ ಹೇಳಿದುದಕ್ಕೆ ಹೊರೆ ಏರಿ ಕಂದಿ ಕುಂದಿದ್ದರು. ಚೆನ್ನಬಸವಣ್ಣ ಅಳಿಯನಾದರೂ ಇರಬಹುದು. ಬಾಲಕನಾದರೂ ಇರಬಹುದು; ಅವನಲ್ಲಿರುವ ಪರಾತ್ಪರ ಬ್ರಹ್ಮತೇಜಸ್ಸನ್ನು ಗುರ್ತಿಸಿದ್ದರು. ಅವನು ತಮ್ಮನ್ನು ಗುರುವೆಂದು ಸಾರಿದ್ದರಿಂದ ನಾಚಿಕೊಂ ಡಿದ್ದರು. ಇದಕ್ಕೆ ತಕ್ಕ ಪ್ರತಿಕ್ರಿಯೆ ವ್ಯಕ್ತಮಾಡಿ ತಲೆ ಭಾರ ಇಳಿಸಿಕೊಳ್ಳಲು ಇರುಳೆಲ್ಲ ಯೋಚಿಸಿ, ಕೊನೆಗೆ ಅವನ ಪಾದಗಳಿಗೆರಗಿ ಕರುಣೆಯ ಕೋರುವದೇ ಯೋಗ್ಯವೆಂದು ಬಗೆದು ಬಂದಿದ್ದರು.

"ಚೆನ್ನಬಸವಣ್ಣನವರು ಗಾಬರಿಯಾಗಿದ್ದರು. ಮೈ ನಡುಗುತ್ತಿತ್ತು; ಕಂಬನಿ ಉದುರುತ್ತಿದ್ದವು. "ಗುರುವೆ" ನೀವುಕೂಡಲಚೆನ್ನಸಂಗಯ್ಯನ ಸಾಕಾರ ಮೂರ್ತಿ!" ಎಂದು ಬಸವಣ್ಣನವರ ಅಪ್ಪುಗೆಯಲ್ಲಿಯೇ ಕೈಮುಗಿಯುತ್ತಿದ್ದರು.

"ಚೆನ್ನಬಸವಣ್ಣಾ ಗುರುನಾನಲ್ಲ; ನೀನು ಗುರು, ನಿಷ್ಕಲಪರಶಿವನ ಸೂಕ್ಷ್ಮ ತತ್ತ್ವವೇ ಸಾಕಾರ ಮೂರ್ತಿಯಾಗಿ ಬಂದವನು ನೀನು! ನೀನು ಸುಜ್ಞಾನಿ ನೀನು ಗುರು ನಾನು ಶಿಷ್ಯ! ನಾನೆಂತು ಗುರು ಚೆನ್ನಬಸವಣ್ಣಾ?"

ಬಸವಣ್ಣನವರ ಬಾಹುಬಂಧನಕ್ಕಿಂತ ಭಾವಬಂಧನದಲ್ಲಿ ಚೆನ್ನಬಸವಣ್ಣ ತತ್ತರಿಸಿದರು. ಕುಸಿದು ಕುಳಿತು ಬಸವಣ್ಣನವರ ಪಾದಗಳನ್ನು ಹಿಡಿದು, ಬಸ ವೇಶ್ವರಾ, ಬಸವತಂದೆ' ಎನ್ನುತ್ತಿರುವಾಗ, ಬಸವೇಶ್ವರರು ಹಿಂದೆ ಸರಿದು ಕೈಮುಗಿದು 'ಚೆನ್ನಬಸವಣ್ಣಾ' ಎನ್ನುತ್ತಿದ್ದರು. ಚೆನ್ನಬಸವೇಶ ಎದ್ದು ಬಿಕ್ಕಳಿ ಸುತ್ತ ಕೈಮುಗಿದು ನಿಂತರು. ಇಬ್ಬರೂ ಮುಗಿದ ಕೈಯವರಾಗಿಯೇ ಅಧ್ಯಾ ತ್ಮಿಕ ನೆಲೆಯಲ್ಲಿ ನಿಂತು, ಭಾವಪರವಶರಾಗಿ, ಒಬ್ಬರಿನ್ನೊಬ್ಬರಿಗೆ ಶರಣಾಗತ ರಾಗಿ ಒಬ್ಬರನ್ನೊಬ್ಬರು ಬಿನ್ನವಿಸಿಕೊಳ್ಳುತ್ತಿದ್ದರು. ಬಸವೇಶರ ಕಂಠ ಬಿಗಿದಿತ್ತು ಚೆನ್ನಬಸವಣ್ಣ ಬಿಕ್ಕಳಿಸುತ್ತಲೇ ಇದ್ದರು.

"ಬಸವೇಶ್ವರಾ, ಬಸವತಂದೆ, ಭುವನವ ಸಲಹಲೆಂದು ಅವತರಿಸಿದ ಆದಿಲಿಂಗ ಅನಾದಿಶರಣ ನೀವು! ನೀವು ತಂದರೆ ಲಿಂಗಬಂತು ಭುವನಕ್ಕೆ! ನೀವು ಮಾಡಿದರೆ ಜಂಗಮವಾಯ್ತು ವಿಶ್ವಕ್ಕೆ! ನಿಮ್ಮ ಕಾರುಣ್ಯವ ಬಯಸಿ, ಬಿನ್ನವಿಸಲು ಸಮಯಕ್ಕೆ ಕಾದು ಕುಳಿತಿರುವಾಗ, ನಾನು ಹೊರಡುವ ಮುನ್ನ ನೀವೇ ಬಿಜಯಂಗೈಸಿ, ಇಂತೆನ್ನ ಮನೋರಥವ ಭಂಗಗೊಳಿಸಬೇಕೇ? ನಿಮ್ಮ ಕರುಣೆಯ ಕೂಸಲ್ಲವೇ ನಾನು?"

"ಚೆನ್ನಬಸವಣ್ಣಾ, ಪಂಚವಿಂಶತಿ ತತ್ತ್ವಗಳಲ್ಲಿ ಪರಿಣಾಮಿ ನೀನು, ಸುಜ್ಞಾನಿ ನೀನು; ಅನಾದಿ ಲಿಂಗಸ್ವರೂಪ ನೀನು ಎನಗೆ ನೀನು ಪರಮಾರಾಧ್ಯ ! ನಿನ್ನ ಕಾರುಣ್ಯವ ಕೋರಿ ಬೇಡಿಕೊಳ್ಳಲು ಬಂದೆ"

"ಅದೆಂತು ಸಾಧ್ಯ ಗುರುವೆ? ನಿಮ್ಮ ಶಿವಭಕ್ತಿ ಶಿವಾಚಾರಗಳ ಸಂದಿಲ್ಲದ ಬೆಸುಗೆಯಲ್ಲಿ ಬೆಳಗದಿಪ್ಪುದೇ ಶಿವಜ್ಞಾನ? ನೀವು ಸ್ವಾನುಭಾವದ ಜ್ಯೋತಿರ್ಲಿಂಗ! ಅದೇ ನನ್ನ ಅನುಭಾವವಿನ್ನೂ ಏರಿಹೋಗಿ ಕೊನೆ ಮುಟ್ಟದ ಸುಜ್ಞಾನಲಿಂಗ! ಇವೆರಡರ ತತ್ತ್ವದಲ್ಲಿ ಅಭೇದ ಇದ್ದರೂ, ಸಿದ್ಧಿ ಸಾಧನೆಗಳ ಕ್ರಿಯಾಭೇದವಿಲ್ಲದಿಲ್ಲ. ನಾಗವ್ವೆಯ ಗರ್ಭದಲ್ಲಿ ನಾನು ಶಿಶುವಾಗಿರುವಾಗ ವಿಭೂತಿಪಟ್ಟವ ಕಟ್ಟಿ, ಲಿಂಗ ಧಾರಣಮಾಡಿದ ದೀಕ್ಷಾಗುರು ನೀವು. ನಾನ ತಂದೆ ತಾಯಿಗಳ ಮಗುವಲ್ಲ, ಮಾಂಸಪಿಂಡವಲ್ಲ! ಗುರುಪುತ್ರ, ವಿಭೂತಿಯ ಪಟ್ಟದ ಮಂತ್ರಪಿಂಡ! ನೀವೇ ಮಂತ್ರದಿಂದ ಮಾಡಿದ ಈ ಘಟಕ್ಕೆ ಕಾರುಣ್ಯವ ಮಾಡಿ ಸಲಹಯ್ಯಾ ಕೂಡಲಚೆನ್ನಸಂಗಮದೇವಾ" ಚೆನ್ನಬಸವಣ್ಣ ಶಿರಬಾಗಿ ಕೈಮುಗಿದನು.

"ಆದಾಗದು ಚೆನ್ನಬಸವಣ್ಣಾ, ನಾನೆ ಶಿಷ್ಯ; ನೀನೆ ಗುರು! ಶಿಷ್ಯ ಗುರುವಿಗೆ ಉಪದೇಶ ಮಾಡಲರಿಯ! ಇದಲ್ಲದೆ ನಾನು ಯಾರಿಗೂ ಗುರೂಪದೇಶದೀಕ್ಷೆ ಮಾಡಿ ಗೊತ್ತಿಲ್ಲ. ತತ್ತ್ವವ ಹಿಡಿದವರಿಗೆ ತೊತ್ತಾಗಿ ನಡೆವ, ನಾನು ನುಡಿಯಲಮ್ಮೆ!"

"ನಾನು ಶಿಷ್ಯ ನಾನು ಗುರು ಎಂಬುದೇತರ ಭೇದ ಗುರುವೆ? ಎತ್ತೆತ್ತ ನೋಡಿದಡತ್ತತ್ತ ಮಹಾಘನ! ಶಿಷ್ಯನನ್ನು ದೂರವಿರಿಸಿ ಗುರುವಿರಬಹುದೇ? ಯಾರು ಗುರು ಯಾರು ಶಿಷ್ಯ? ಸ್ವರೂಪದಲ್ಲಿ ಮುಳುಗಿದ ಅನುಭವ ಪರಾವಾಣಿ! ಪರಾವಾಣಿಗೆ ಅಧಿಕೃತನಾದವನು ಗುರು; ಗುರುವಿನ ಪರಾದಿಂದ ಉಪದೇಶದ ಉಪಕ್ರಮ ಆರಂಭವಾಗುವದು. ಅದು ಕ್ರಮವಾಗಿ ಪಶ್ಯಂತಿ, ಮಧ್ಯಮ, ವೈಖರಿಗೆ ಬಂದು ಶಿಷ್ಯನಿಗೆ ಶ್ರಾವಣವಾಗುವದು.

ಆ ಉಪದೇಶ ಅದೇ ಮಾರ್ಗದಿಂದ ಒಳಗೆ ಇಳಿದು ಶಿಷ್ಯನ 'ಪರಾ'ಕ್ಕೆ ಮುಟ್ಟಲು ಅದರ ಉಪಸಂಹಾರವಾಗುವದು. ಆಗ ಗುರುಶಿಷ್ಯರು ಏಕ ಸ್ವರೂಪರು! ಇದನ್ನು ನೀವೆ ಬಲ್ಲವರಲ್ಲವೇ? 'ಅಪರಾ' ವಿದ್ಯೆಯಲ್ಲಿ ಬಳಕೆ ಗೊಳ್ಳುವ ಗುರು-ಶಿಷ್ಯ ಭಿನ್ನೋಪದೇಶ 'ಪರಾ' ವಿದ್ಯೆಯಲ್ಲಿ ನಡೆಯಬ ಹುದೇ? ಕ್ರಿಯಾಲಿಂಗವು ವಿಕಾಸಗೊಂಡು ಪ್ರವರ್ತಿಸಿ, ಜ್ಞಾನಲಿಂಗರೂಪ ದಲ್ಲಿ ಸಮನ್ವಯಗೊಳ್ಳುತ್ತಿರುವ ಸ್ವರೂಪವೇ ಗುರೂಪದೇಶ! ಆ ಬೆಳಕಿನ ಭಾಗ್ಯ ಕರುಣಿಸಬೇಕು ತಂದೆ"

"ಎನ್ನ ಅರುಹಿನ ಆದಿಗೆ ನೀನೆ ಕರ್ತನೆಂದು ನಾನಿರುವಾಗ, ನಾನು ಪೀಠದ ಮೇಲೆ ಕುಳಿತು, ನಿನ್ನನ್ನು ಶಿಷ್ಯನೆಂದು ಕೆಳಗಿರಿಸಿ ಅನುಗ್ರಹ ಮಾಡು ವದಕ್ಕೆ ನನ್ನಿಂದ ಖಂಡಿತ ಆಗದು,

ಕೆಳಗೆ ಕುಳಿತುಬಿಟ್ಟರು ಬಸವಣ್ಣನವರು. ಚೆನ್ನಬಸವಣ್ಣನವರೂ ಕುಳಿತು ಕೇಳಿದರು:

"ಅಂಜಲೇಕೆ ಗುರುವೆ? ನೀವೇ ಬಂದುದೇ ನಿಮ್ಮ ಕರುಣಾ ಗುಣ. ಈ ವೇಳೆಯೇ ಶುಭವೇಳೆ! ನೀವೆ ಕೊಟ್ಟ ಲಿಂಗವಿದು, ಈ ಲಿಂಗದ ಲಕ್ಷ ಣವನ್ನಾದರೂ ತಿಳಿಸಿರಿ." ಎನ್ನುತ್ತ ಸಜ್ಜೆಯೊಳಗಿನ ಲಿಂಗವನ್ನು ತೆಗೆದು ವಿನಯದಿಂದ ಬಸವಣ್ಣನವರ ಕೈಯಲ್ಲಿಟ್ಟರು,

"ಲಿಂಗದ ಲಕ್ಷಣವನ್ನು ಎಳ್ಳಷ್ಟೂ ಪರುಕಿಸಲಾಗದು."
ಎನ್ನುತ್ತ ಬಸವಣ್ಣ ಮರಳಿ ಕೊಟ್ಟರು, "ಇದೇ ನನಗೆ ಗುರುದೀಕ್ಷೆ" ಎಂದು ಚೆನ್ನಬಸವಣ್ಣ ಸ್ವೀಕರಿಸಿ ಪರಮಾನಂದದಿಂದ ಗುರುಬಸವೇಶಗೆ ಪೊಡಮ ಟ್ಟರು.* 'ಲಿಂಗದ ಲಕ್ಷಣವನ್ನು ಎಳ್ಳಷ್ಟೂ ಪರುಕಿಸಲಾಗದು' ಎಂಬುದೇ ಉಪದೇಶದ ಬೀಜವಾಕ್ಯವೆಂದು ಚೆನ್ನಬಸವಣ್ಣನವರು ಅದನ್ನೇ ತನು-ಮನ ಭಾವಗಳಲ್ಲಿ ವಿಕಸನಗೊಳಿಸಿ, ಸರ್ವೋಚ್ಚ ಗುರೂಪದೇಶವನ್ನು ಸಂಪಾದಿಸಿ ಕೊಂಡರು. ತಮಗೆ 'ಲಿಂಗಸ್ವಾಯತ ಸಂಬಂಧ ಸ್ವಯವಾದ ಭೇದವನ್ನು ವಿವೇಕ ಮುಖದಿಂದ ಪರಿಣಾಮಿಸಿಕೊಂಡರು. ಆದರೆ ಅಂದಿನಿಂದ ಅಳಿಯಮಾವಂದಿ ರಿಬ್ಬರು ಪರಸ್ಪರ ಗುರು-ಶಿಷ್ಯರಂತೆ ನಡೆದರು.

* * *

ಹಿಂದಿನ ಪ್ರಕರಣದ ಆರಂಭದಲ್ಲಿ ಹೇಳಿದಂತೆ ಅನುಭವಮಂಟ

---

* ಚೆನ್ನಬಸವಪುರಾಣ ಸಂ. ೬, ಪದ್ಯ ೨ರಿಂದ ೭ ನೋಡಬೇಕು, ಮತ್ತು ಶೂನ್ಯ ಸಂಪಾದನೆಯ ೪ ನೆಯ ಸಂಪಾದನೆ ಈ ಸಂದರ್ಭವನ್ನು ವಿವರಿಸಿದೆ. ಚೆನ್ನಬಸವಣ್ಣನವರ ಹಲವು ವಚನಗಳು, ಅವರ ಗುರು ಬಸಣ್ಣನವರೆಂದು ಖಚಿತ ಪಡಿಸುತ್ತದೆ,

ಪದ ವೈಚಾರಿಕ ಕ್ರಾಂತಿಯ, ಧರ್ಮಾದರ್ಶಗಳ, ಕಾರ್ಯಕಲಾಪಗಳಿಂದ ಆಕರ್ಷಿತರಾಗಿ ಕಲ್ಯಾಣಕ್ಕೆ ಬರುವವರ ಸಂಖ್ಯೆ ಬೆಳೆಯುತ್ತಲೇ ಇತ್ತು. ದೂರದ ಕಾಶಿ, ಕಾಶ್ಮೀರ ಬಾರ್ಬರ, ಸೌರಾಷ್ಟ್ರ, ಮಾಳವ, ಕಳಿಂಗ, ಆಂಧ್ರ ತಮಿಳುನಾಡು, ಮಹಾರಾಷ್ಟ್ರಗಳಿಂದಲೂ ಬಂದರಲ್ಲದೆ ಕನ್ನಡನಾಡಿನವರೂ ಅಗಣಿತವಾಗಿ ಬಂದರು. ಹೀಗೆ ಸಾವಿರಾರು ಜನರು ಕಲ್ಯಾಣದಲ್ಲಿ ಬಂದು ನೆಲೆಸಿದರು. ಮಾನವ ಜೀವನದ ನೆಲೆಬೆಲೆಯ ನಿರ್ಣಯ ಮಾಡಲಿರುವ ಶಿವಾನುಭವ ಮಂಟಪದ ಕಾರ್ಯದಲ್ಲಿ ಕ್ರಿಯಾತ್ಮಕ ದೃಷ್ಟ್ಯಾರರಾಗಿ ಪಾಲು ಗೊಂಡರು. ಲಿಂಗಾಂಗ ಸಾಮರಸ್ಯ ತತ್ತ್ವಕ್ಕೊಲಿದು ಲಿಂಗಾಂಗಿಗಳಾಗಿ ಶಾಂತಿ ಸಮಾಧಾನದ ಹೊಸಜೀವನಕ್ಕೆ ಒಳಗಾದರು. ಈ ಸಂಘಟನೆಯ ಮುಂದಾಳು ಬಸವಣ್ಣನವರಾಗಿದ್ದರೂ ಚೆನ್ನಬಸವಣ್ಣನವರೇ ಸಂಚಾಲಕರಾಗಿದ್ದರು. ಧಾರ್ಮಿಕ ಸಂಸತ್ತಿನಂತಿರುವ ಅನುಭವಮಂಟಪದ ದೈನಂದಿನ ಯೋಜನೆ ರೂಪಿಸಿ, ಸರ್ವರಿಗೂ ಸಮ್ಮತವಾಗುವ ರೀತಿಯಲ್ಲಿ ಕಾರ್ಯನಡಿಸುತ್ತಿದ್ದ ಚಿಕ್ಕವಯದ ಚೆನ್ನಬಸವಣ್ಣ ಅಚ್ಚುಮೆಚ್ಚಿನ ಕಾರ್ಯದರ್ಶಿಯಾಗಿದ್ದರು. ನಿರ್ಣಯಾತ್ಮಕ ಹಂತದಲ್ಲಿ ಕಂಡುಬರುವ ಅವರ ಜ್ಞಾನದ ಆಳವನ್ನು ಅರಿತು ಅನುಭಾವಿಗಳೂ ಅಚ್ಚರಿಪಡುತ್ತಿದ್ದರು.

ಅಸಂಖ್ಯಾತ ಅತಿಥಿ ಅಭ್ಯಾಗತರಿಂದ ಮಹಮನೆಯ ಕಾರ್ಯಭಾರ ಮೇರೆ ಮೀರಿ ಬೆಳೆದಿತ್ತು. ನಾಗಲಾಂಬೆ ಪಾಕಶಾಲೆಯ ಕೆಲಸದಲ್ಲಿ, ನಿಲಾಂಬೆ ಬಂದವರ ಪೂಜಾಪ್ರಸಾದಗಳ ವ್ಯವಸ್ಥೆಯಲ್ಲಿ, ಚೆನ್ನಬಸವಣ್ಣ ಆ ಶರಣ ಕಾಯಕದ ನಿಲುವಿಗೆ ಅನುಕೂಲ ಒದಗಿಸುವ ಕಾರ್ಯದಲ್ಲಿ ಮೇಲ್ವಿಚಾರ ರಾಗಿ ಶ್ರಮಿಸುತ್ತಿದ್ದರು. ಗಂಗಾಂಬೆ, ಬಸವಣ್ಣನವರ ಸೇವೆ ಮಾಡಿ ಅವ ಕಾಯಕಕ್ಕೆ ತಕ್ಕ ಏರ್ಪಾಡುಗಳನ್ನು ಒದಗಿಸುತ್ತಿದ್ದಳು. ಎಲ್ಲ ಶರಣಪ್ರಮು ಖರೂ ಈ ಕೆಲಸಗಳಲ್ಲಿ ಮನಮುಟ್ಟಿ ಸಹಕರಿಸಿ ನೆರವಾಗುತ್ತಿದ್ದರು.

ಶಿವಭಕ್ತರಲ್ಲಿ ಜಾತಿಭೇದಗಳನ್ನು ಮೇಲು ಕೀಳುಗಳನ್ನು ತೆಗೆದು ಹಾ ದ್ದರಿಂದ ಸಾಮುದಾಯಕ ಲಿಂಗದೀಕ್ಷಾ ಸಮಾರಂಭಗಳು ಭರದಿಂದ ಜರುಗು ತ್ತಿದ್ದವು. ಅವೆಲ್ಲವುಗಳನ್ನು ಚೆನ್ನಬಸವಣ್ಣ ನಿಯೋಜಿಸಿ ನಡೆಸುತ್ತಿದ್ದರು. ಅವ ನೂತನಗೊಳಿಸಿದ ಷಟ್‌ಸ್ಥಲ ಮಾರ್ಗವು ಮಾನಸಿಕವಾಗಿ ಪರಮಾತ್ಮನ ಅನುಸಂಧಾನ ಮಾಡುವ ಮಹಾಮಾರ್ಗವೆಂಬ ಅರಿವು ನಿಚ್ಚಳವಾದ್ದರಿಂ ನಗರದಲ್ಲಿಯ ನೂರೆಂಟು ಕಾಳಮುಖ ಪಾಶುಪತ ಮಠಗಳ ಸ್ವಾಮಿಗ ಕ್ರಮವಾಗಿ ಶರಣಧರ್ಮ ಸ್ವೀಕರಿಸಿದರು. ಅವರೆಲ್ಲರಿಗೆ ಘನಲಿಂಗಿ ರು

ಮುನಿದೇವರಿಂದ ಮಾಹೇಶ್ವರದೀಕ್ಷೆ ಕೊಡಿಸಿ, ಅವರು ತಮ್ಮ ಸ್ಥಳದಲ್ಲಿ ಲಿಂಗಾಚಾರಿಗಳಾಗಲಿಚ್ಛಿಸುವ ಬೇರೆಯವರಿಗೆ ಲಿಂಗದೀಕ್ಷೆನೀಡುವಂತೆ ಚೆನ್ನಬಸವಣ್ಣ ವ್ಯವಸ್ಥೆಗೊಳಿಸಿದರು. ಮಹಮನೆಯಿಂದ ಶರಣರೂ ಆಯಾಮಠಗಳಿಗೆ ಹೋಗಿ ಲಿಂಗಾಂಗತತ್ತ್ವಗಳನ್ನು ಬೋಧಿಸುವದಕ್ಕೆ ಆ ಸ್ವಾಮಿಗಳಿಗೆ ನೆರವಾಗುತ್ತಿದ್ದರು ಆ ಮಠಗಳು ವೀರಶೈವ ಮಠಗಳಾದವು. ಆದರೆ ಹಿರಿಯ ಪಾಶುಪತ ಮಠವೊಂದರ ಅಧಿಪತಿ ಜ್ಞಾನಾನಂದ ಸ್ವಾಮಿಗಳು ಮಾತ್ರ ತಮ್ಮ ಪೀಠದ ಪ್ರತಿಷ್ಠೆಯ ಮೋಹದಿಂದ ಬಹುದಿವಸ ಹೊಸ ವಿಚಾರಗಳಿಗೆ ಬಗಲಿಲ್ಲ, ಆದರೆ ಶರಣರ ಪ್ರಭಾವದ ವಾತಾವರಣವು ಅವರು ಬಾಗಿ ಬರುವಂತೆ ಮಾಡಿತು.

ಒಮ್ಮೆ ಅವರ ಮಠದ ಉತ್ಸವ ನಡೆಯಬೇಕಾಗಿತ್ತು. ಅದು ಅವರ ಪಟ್ಟಾಧಿಕಾರದ ವಾರ್ಷಿಕೋತ್ಸವ. ಅದರಲ್ಲಿ ಆ ಸ್ವಾಮಿಗಳು ಪಲ್ಲಕ್ಕಿಯಲ್ಲಿ ಮೆರವಣಿಗೆ ಹೊರಡುವದು ಕಾಣಿಕೆ ಸ್ವೀಕರಿಸುವದು ಮುಖ್ಯಕಾರ್ಯಗಳು. ಆ ಉತ್ಸವ ಮುಂದೆ ಮೂರು ದಿವಸಕ್ಕಿರುವಾಗ, ಆ ಓಣಿಯಲ್ಲಿ ವಾಸಿಸುವ ಅನುಭವಮಂಟಪದ ಅಭಿಮಾನಿಗಳು ತಮ್ಮಲ್ಲಿ ಒಂದು ಸಾಮುದಾಯಿಕ ಲಿಂಗಧಾರಣದೀಕ್ಷಾಕಾರ್ಯವನ್ನು ಹಮ್ಮಿಕೊಂಡರು. ಶರಣರ ಸರಳ ಜೀವನದ ವಿಶಾಲತತ್ತ್ವಗಳಿಗೆ ಮಾರುಹೋದ ನೂರಾರು ಕುಟುಂಬಗಳ ಜನರು ಲಿಂಗದೀಕ್ಷೆಹೊಂದಲು ಸನ್ನದ್ಧರಾಗಿದ್ದರು. ಅಲ್ಲಿಯ ಜನರ ಬಿನ್ನಹದಂತೆ ಆ ಇಡೀ ಕಾರ್ಯಕ್ರಮದ ಯೋಜನೆಯನ್ನು ಚೆನ್ನಬಸವಣ್ಣನವರೇ ರೂಪಿಸಿದ್ದರು.

ಒಂದು ವಿಶಾಲವಾದ ಹಂದರದೊಳಮುಗ್ಗಲು ಎದುರುಬದರಾಗಿ ಎರಡು ಸಾಲುಗಳಲ್ಲಿ ಹತ್ತುದೀಕ್ಷಾಮಂಟಪಗಳನ್ನು ವಿರಚಿಸಿದರು. ಅವು ತಳಿರು-ತೋರಣ-ಬಾಳೆಗಿಡಗಳಿಂದ ರಂಗವಲ್ಲಿಗಳಿಂದ ಅಲಂಕೃತವಾಗಿದ್ದವು. ಆಸನಗಳು, ಅಗ್ಗವಣಿಪಾತ್ರೆಗಳು, ಧೂಪ, ದೀಪ, ಭೂತಿ, ಪತ್ರಿ, ಪುಷ್ಪಗಳು, ಕಲಶದಾರತಿಗಳು ಸಜ್ಜಾಗಿದ್ದವು. ಪ್ರತಿಯೊಂದು ಮಂಟಪದಲ್ಲಿ ಹನ್ನೊಂದು ಜನರಿಗೆ ಲಿಂಗಧಾರಣದೀಕ್ಷೆ ನೀಡುವಂತೆ ಹತ್ತು ಮಂಟಪಗಳಿಗೆ ಹತ್ತುಜನ ಗುರುಮೂರ್ತಿಗಳು ಸಿದ್ಧರಾಗಿದ್ದರು. ಎರಡೂ ಸಾಲುಗಳ ಮಧ್ಯದಲ್ಲಿ ವಿರಚಿಸಿದ ಅಗ್ರಪೀಠದಲ್ಲಿ ಮಂಡಿಸಿದ ರುದ್ರಮುನಿದೇವರು ಹತ್ತು ಮಂಟಪಗಳ ಸೂತ್ರಧಾರಕರಾಗಿದ್ದರು. ಅವರ ಮುಂದೆಯೂ ಹನ್ನೊಂದು ಜನ ದೀಕ್ಷಾರ್ಥಿಗಳಿದ್ದರು. ಅವರ ಪಕ್ಕದಲ್ಲಿ ಜ್ಞಾನಮೂರ್ತಿ ಚೆನ್ನಬಸವಣ್ಣನವರು ಕುಳಿತಿದ್ದರು.

ನಿಯಮಿತ ವೇಳೆಗೆ ಕಾರ್ಯಾರಂಭವಾಗಿ ವಿಧಾನಗಳು ನಡೆದವು. ಕ್ರಿಯಾ, ಮಂತ್ರ, ಮೇಧಾ ಎಂಬ ದೀಕ್ಷಾತ್ರಯಗಳು, ಲಿಂಗಧಾರಣ ಮಂತ್ರೋ

ಪದೇಶಗಳು ಆದವು. ಹೀಗೆ ೧೨೧ ಜನರು ಶುದ್ಧಜೀವರಾಗಿ, ಲಿಂಗರಾಗಿ, ಲಿಂಗಸಾಮರಸ್ಯ ಸಾಧನೆಗೆ ಅರ್ಹರಾದರು. ಅವರಲ್ಲಿ ಪೂರ್ವಾಶ್ರಯದ ಹಲವು ಮತೀಯರು ಸಮಾವೇಶಗೊಂಡಿದ್ದರು. ಅವರೆಲ್ಲ ಒಂದೇ ಶಿವಭಕ್ತಿ ಪಂಥದವರಾದರು. ಹೀಗೆ ಮತ್ತೆ ಮತ್ತೆ ೧೨೧ ಜನರಂತೆ ಒಟ್ಟಿಗೆ ಐದು ಸಲ ಲಿಂಗಧಾರಣ ದೀಕ್ಷಾಕಾರ್ಯ ಜರುಗಿತು. ಮಧ್ಯಮಧ್ಯದಲ್ಲಿ ಮಹಮನೆಯ ಶರಣೆಯರಿಂದ ಲಿಂಗತತ್ತ್ವಗೀತೆಗಳ ಪಠಣವಾಗುತ್ತಿತ್ತು. ಕಾರ್ಯಕ್ರಮಗಳು ಶಿಸ್ತಿನಿಂದ ನಡೆವಂತೆ ಹಿರಿಯ ಶರಣರು ನೋಡಿಕೊಳ್ಳುತ್ತಿದ್ದರು. ಕೊನೆಯ ಮಂಗಲದ ನಂತರ ಚೆನ್ನಬಸವಣ್ಣನವರು, ವಿಕಸನ ಮಾರ್ಗದ ಮೊದಲ ಮೊಗ್ಗೆಗಳಂತಿರುವ ಶಾಂತಸುವಿಮಲ ಹೃದಯಿಗಳಾದ ದೀಕ್ಷಾರ್ಥಿಗಳನ್ನು ಕುರಿತು ನಾಲ್ಕು ಮಾತುಗಳನ್ನು ಆಡಿದರು.

"ಹರ ತನ್ನ ರೂಪವ ತೋರಲೆಂದು
ಶ್ರೀ ಗುರು ರೂಪಾಗಿ ಮರ್ತ್ಯಕ್ಕೆ ಬಂದು,
ಕರಸ್ಥಲಕ್ಕೆ ಲಿಂಗವಾಗಿ, ಪ್ರಾಣಸ್ಥಲಕ್ಕೆ ಜಂಗಮವಾಗಿ,
ಮನಸ್ಥಲಕ್ಕೆ ಮಂತ್ರವಾಗಿ, ತನುಸ್ಥಲಕ್ಕೆ ಪ್ರಸಾದವಾಗಿ,
ಇಂತೀ ಚತುರ್ವಿಧಸ್ಥಲದಲ್ಲಿ ಸಾಹಿತ್ಯವಾದನಯ್ಯಾ
ಕೂಡಲ ಚೆನ್ನಸಂಗಯ್ಯನಲ್ಲಿ ಬಸವಣ್ಣನು.

"ಮಾನವನು ಶಿವಾಂಶಸಂಭೂತನು. ಅದನ್ನು ಅವನು ಮರೆತಿದ್ದಾನೆ. ಅದನ್ನು ಅರಿಕೆಗೊಳಿಸುವದಕ್ಕಾಗಿ ಹರನು ಗುರುವಾಗಿ ಕಾಣಿಸಿಕೊಳ್ಳುವನು. ಹಲವು ಹುಟ್ಟುಗಳ ಹಿಂದೆ ಒಮ್ಮೆ ಜೀವಿಗೆ ಆಕಸ್ಮಿಕವಾಗಿ ಪರಪೀಡೆ ಮೊದಲಾದ ದುಷ್ಪ್ರವೃತ್ತಿಗಳನ್ನು ಬಿಟ್ಟು ಸಹಜ ನೀತಿಯಲ್ಲಿ ನಡೆಯುವ ಒಲವಾಯಿತು. ಅದುವೆ ಶಿವನ ಕರುಣೆಯ ಕಿರಿಯ ಕಿರಣದ ಮೊನೆಯು ಮೂಡಿದ ರಸನಿಮಿಷ! ಆ ಜೀವಿಯ ಭಾಗ್ಯದ ಅಮೃತ ನಿಮಿಷ!! ಆಗ ಆ ಜೀವಿ ಒಳಿತೆಡೆ ಚಲಿಸಿ ಸತ್ತು, ಮುಂದೆ ಅದೇ ಸುಳವಿಗೊಳಪಟ್ಟು ಅನೇಕ ಜನ್ಮಗಳಲ್ಲಿ ಸುಕೃತವನೆ ಮಾಡುವದು. ಹೀಗೆ ಹಲವು ಜನ್ಮಗಳ ಪುಣ್ಯಫಲದಿಂದ ಅದು ಮನುಷ್ಯನಾಗಿ ಬರುತ್ತದೆ. ಸ್ವ-ಸ್ವರೂಪಜ್ಞಾನಹೊಂದಿ ಭವಬಂಧನ ನೀಗಲು ಮನುಷ್ಯಜನ್ಮದಲ್ಲಿ ಮಾತ್ರ ಸಾಧ್ಯ! ಅವನಲ್ಲಿ ಅವ್ಯಕ್ತವಾಗಿ ಶಿವಭಾವ ಚೈತನ್ಯವಿರುತ್ತದೆ. ಅದನ್ನು ವಿಕಾಸಗೊಳಿಸಿಕೊಂಡು, ಅದರಲ್ಲಿ ಸಮರಸಗೊಂಡು ಸುಖಿಯಾಗಬೇಕು. ಅದನ್ನು ತಿಳಿಸುವದು ಗುರುವಿನ ಕರ್ತವ್ಯ! ತನ್ನ ಪರಮಬಂಧುವನ್ನು ತನ್ನಲ್ಲಿ ಸೇರಿಸಿಕೊಳ್ಳುವದಕ್ಕೆ ಪರಶಿವನಿಗೆ ಆತುರ! ಅದಕ್ಕಾಗಿ ಗುರುವಾಗಿ ಮರ್ತ್ಯದಲ್ಲಿ ಬರುತ್ತಾನೆ. ಲಿಂಗ-ಜಂಗಮ ಮಂತ್ರ-ಪ್ರಸಾದಗಳು ಅವನ ಕರುಣೆಯ [illegible] ಜ್ಞಾನಸಾಧನ

ಗಳು. ಜ್ಞಾನವು ಕ್ರಿಯಾ ಜ್ಞಾನಸ್ವರೂಪದಲ್ಲಿರುವದು, ಗುರು ಬೋಧಿಸುವ ಕ್ರಿಯಾಚಾರದಲ್ಲಿ ಜ್ಞಾನವು ಅಡಕವಾಗಿರುವದು. ನಿಜದ ಅರವಿನಲ್ಲಿ ಮುಳುಗಿ ಅರಿವಿಲ್ಲದಾಗುವವರೆಗೆ ಕ್ರಿಯೆಯು ಬೇರೆದೇ ಇರುವದು. ಅರಿವಿನ ಸ್ಫುರಣದಲ್ಲಿ ಕ್ರಿಯೆ ಆನಂದಗಳು ಬೆಂಬಳಿಸಿಯೇ ಬರುವವು. ಕ್ರಿಯಾ-ಜ್ಞಾನ-ಆನಂದಗಳು ಸಾಧಕನ ಸಾಧನೆಯಲ್ಲಿ ಜೀವ ಚೇತನಗಳಾಗಿ, ನಿಜದರಿವಿಗೆ ಒಯ್ಯುವ ವಾಹನಗಳಾಗಿ ಪರಿಣಮಿಸುವವು. ಈ ಮೂಲಕವಾದ ಮಾರ್ಗವು ಷಟ್‌ಸ್ಥಲ ಮಾರ್ಗವಾಗಿದೆ. ಇಂದು ನೀವು ಶುದ್ಧಜೀವಿಗಳಾದಿರಿ; ಲಿಂಗೋಪಾಸನೆಗೈದು ಲಿಂಗದಲ್ಲಿ ಸಮರಸಗೊಳ್ಳಲು ಅರ್ಹರಾದಿರಿ. ಆಣವ-ಮಾಯಾ-ಕಾರ್ಮಿಕ ಎಂಬ ಮೂರು ಮಲಗಳು ತಾತ್ವಿಕವಾಗಿ ಇಂದು ಪರಿಹರಿಸಲ್ಪಟ್ಟವು. ಆದರೆ ಅವು ಮರಳಿ ನಿಮ್ಮ ಸನಿಹಕ್ಕೆ ಬಾರದಂತೆ ಸಾಧನೆಯಿಂದ ನಿಮ್ಮ ಅಂತಃಕರಣದ ಶುದ್ಧತ್ವವನ್ನು ಕಾಪಾಡಿಕೊಳ್ಳಬೇಕು. ಆಗಲೆ ಪೂಜಾಮಧ್ಯದಲ್ಲಿ ಶರಣೆತಾಯಿಗಳು ಹಾಡಿದುದನ್ನು ನೀವು ಕೇಳಿದಿರಿ:

ಲಿಂಗ ಮಧ್ಯದೊಳಗೆ ಜಗವಿರ್ದುಡೇನೋ?
ಜಗವ ಹೊರಗಿಕ್ಕಿ ಲಿಂಗವನೊಳಗಿಟ್ಟುಕೊಂಬ
ಶರಣನ ಘನಕ್ಕೆ ಶರಣೆಂಬೆ
ಆ ಮಹಾಘನ ಆಯುಕ್ಕೆ ಒಳಗು ಪ್ರಳಯಕ್ಕೆ ಹೊರಗು,
ಕೂಡಲ ಚೆನ್ನಸಂಗಯ್ಯಾ

ಅಂತಹ ಮಹಾಘನವ ಸ್ವಾಯತಮಾಡಿಕೊಳ್ಳುವ ಶರಣರು ನೀವು. ಈ ದೀಕ್ಷಾತ್ರಯದಿಂದ ಸಮಗ್ರ ಷಟ್‌ಸ್ಥಲದ ತಿಳವಳಿಕೆ ನಿಮಗೆ ಆಗಿರಲಾರದು. ನೀವು ಮಾಡಬೇಕಾದ ಲಿಂಗಾರ್ಚನೆ, ಅರ್ಪಣೆ, ಅನುಭಾವಗಳಿಗೆ ಮಾರ್ಗದರ್ಶನ ಮಾಡುತ್ತ ಗುರುಗಳು ಷಟ್‌ಸ್ಥಲಜ್ಞಾನವನ್ನು ಶಿಷ್ಯರಾದ ನಿಮ್ಮಲ್ಲಿ ಅಳವಡಿಸಬೇಕು. ಗುರು ಶಿಷ್ಯಸಂಯೋಜನೆ ನಿರಂತರವಾದುದು. ಅಷ್ಟಾವರಣದಲ್ಲಿ ಉಪಾಸ್ಯಗಳಾದ ಗುರು-ಲಿಂಗ-ಜಂಗಮಗಳನ್ನು ಅಂತರಂಗದ ಅರಿವು ಅನುಭವ ಆನಂದಗಳಿಗೆ ಸಮನ್ವಯಿಸಿಕೊಳ್ಳಬೇಕು. ಲಿಂಗದೀಕ್ಷೆಯಿತ್ತು ಶಿಷ್ಯರನ್ನು ಪರಿಗ್ರಹಿಸಿದ ಬಳಿಕ ಅವರನ್ನು ಸರ್ವಾಚಾರ ಸಂಪನ್ನರನ್ನಾಗಿ ಮಾಡುವದು ಗುರುಗಳ ಹೊಣೆ! ಶಿಷ್ಯರಿಂದ ಗುರುಭಕ್ತಿಯನ್ನು ಮಾತ್ರ ಕಡ್ಡಾಯವಾಗಿ ಬಯಸುವ ಗುರುಗಳು ಗುರುಗಳೇ ಅಲ್ಲ.

ಲಿಂಗಧರಿಸಿದವರು ಪೂಜಾಪ್ರಸಾದಗಳಿಗೆ, ಧನ ಧಾನ್ಯಗಳನ್ನು ಸತ್ಯಶುದ್ಧ ಕಾಯಕದಿಂದ ಸಂಪಾದಿಸಬೇಕು. ಆ ದ್ರವ್ಯವು ಲೋಭ ಮೋಹಗಳ ಬಲೆಗೆ ಒಳಗಾಗಿರಬಾರದು. ಜ್ಞಾನಸಮುಕ್ತ ಕ್ರಿಯೆ, ಇಷ್ಟಲಿಂಗೋಪಾಸನೆಗಷ್ಟೇ ಸಂಬಂಧಿಸಿರುವದಿಲ್ಲ. ಅದು ಕಾಯಕದಲ್ಲಿಯೂ ವ್ಯಾಪಿಸಿದೆ. ಪರಿಶುದ್ಧ ಕಾಯಕವು

ಶಿವಕ್ರಿಯೆಯೆ ಆಗಿರುವದು. ಅದರಲ್ಲಿ ಪರಮಾನಂದದ ಪ್ರಾಪ್ತಿಯಿದೆ. ಆದರಿಂದ 'ಕಾಯಕವೆ ಕೈಲಾಸ' ವೆಂದು ಅಣ್ಣನವರು ನಮಗೆ ಮನಗಾಣಿಸಿದ್ದಾರೆ. ಹೀಗೆ ನಡೆವವರದೊಂದು ಜಾತಿಯಲ್ಲ. ಆಗಮೋಕ್ತ ವೀರಶೈವವು ವಿಶ್ವಮಾನ್ಯ ಧಾರ್ಮಿಕ ತತ್ತ್ವಗಳುಳ್ಳ ಸಾಮಾಜಿಕ ವ್ಯವಸ್ಥೆಯಾಗುವಂತೆ ಅದರಲ್ಲಿ ತಕ್ಕ ಮಾರ್ಪಾಡು ಮಾಡುವದು ಶರಣರ ಉತ್ಕಟ ಇಚ್ಛೆಯಾಗಿದೆ. ಆತ್ಮೋನ್ನತಿಯ ಅಂತಿಮ ಹಂತವನ್ನು ತಲುಪುವದಕ್ಕೆ ಹೆಣ್ಣು-ಗಂಡು ಎನ್ನದೆ, ಅವರು ಇವರು ಎನ್ನದೆ ಸರ್ವರಿಗೂ ಸಮನಾಧಿಕಾರವುಳ್ಳ ಸಾಧನಮಾರ್ಗವನ್ನು ರೂಪಿಸುವದೂ ಅವರ ಉದ್ದೇಶವಾಗಿದೆ. ಈ ಕಾರ್ಯ ಅನುಭವಮಂಟಪದಲ್ಲಿ ಆರಂಭವಾಗಿ ತೀವ್ರಗತಿಯಿಂದ ನಡೆಯುತ್ತಲಿದೆ. ಕೊನೆಯದಾಗಿ ಒಂದು ಮಾತು ನೆನಪಿಡಬೇಕು:

'ಅಯ್ಯಾ ತನುಶುದ್ಧವಾಗಿ ಇಷ್ಟಲಿಂಗವ ಪೂಜಿಸಬೇಕು.
ಮನಶುದ್ಧವಾಗಿ ಪ್ರಾಣಲಿಂಗವ ಧ್ಯಾನಿಸಬೇಕು.
ಭಾವಶುದ್ಧವಾಗಿ ಭಾವಲಿಂಗವ ಭಾವಿಸಬೇಕು......'

ಇಂತೀ ತ್ರಿವಿಧವನರಿಯಬೇಕು. 'ಕ್ರಿಯಾದ್ವೈತಂ ನ ಕರ್ತವ್ಯಂ, ಭಾವಾದ್ವೈತಂ ಸಮಾಚಾರೇತ್' ಎಂಬ ಆಗಮದ ನುಡಿಯಂತೆ ಲಿಂಗ-ಅಂಗಗಳು ಕ್ರಿಯೆಯಲ್ಲಿ ದ್ವೈತವನ್ನು, ಭಾವದಲ್ಲಿ ಅದ್ವೈತವನ್ನು ಅಳವಡಿಸಿಕೊಳ್ಳಬೇಕು. ಇದನ್ನು ಬಿಟ್ಟು 'ಲಿಂಗದೇಹಿ ಸದಾ ಶುಚಿಃ' ಎಂಬೊಂದು ವಾಕ್ಯವನೆ ಮುಂದು ಮಾಡಿ ಕ್ರಿಯಾದ್ವೈತಿಯಾದವನಿಗೆ ನರಕವೇ ಗತಿ! ಬೇರಿಗೆ ನೀರೆರೆದರೆ ಮರಕ್ಕೆ ಹೂವಾಗಿ ಫಲಕೊಡುವದು. ಮರದ ರೆಂಬೆಗಳಿಗೆ ನೀರೆರೆದರೆ ಫಲಗಳಾಗುವಂತಿಲ್ಲ, ಬರಿಯ ಜ್ಞಾನದ ಮಾತು ನಿಷ್ಪ್ರಯೋಜಕ! ಮಾತಿನ ಮೋಡಿಗೆ ಭ್ರಮಿತರಾಗಬಾರದು. ಅದು ಏರಲರಿಯದೆ ಗಿರಿಯ ಶಿಖರಕ್ಕೆ ಹಾರಿದಂತಾಗುವದು. ಕಾಲು ನೊಂದಾವಲ್ಲದೆ ಶಿಖರವ ಸಾರುವದು ಸಾಧ್ಯವೇ ಇಲ್ಲ. ಇವಿಷ್ಟು ಸ್ಥೂಲವಾದ ಮಾತುಗಳು. ಸಾಧನೆಯ ಕ್ರಮದಲ್ಲಿ ನಿಮಗೆ ಬರುವ ಅನುಭವಗಳನ್ನು ಅನುಭವ ಮಂಟಪದಲ್ಲಿ ವಿವರಿಸಿರಿ. ಅಲ್ಲಿ ವಿಚಾರವಿನಿಮಯದಿಂದ ಹೆಚ್ಚಿನ ಸೂಕ್ಷ್ಮವಿಚಾರಗಳನ್ನು ತಿಳಿದುಕೊಳ್ಳೋಣ! ನಾವೆಲ್ಲರು ಧನ್ಯರಾಗೋಣ! ನಮೋನಮಃ"

ಚೆನ್ನಬಸವಣ್ಣ ಕೈಮುಗಿದು ಮಾತು ಮುಗಿಸಿದಾಗ ನೂತನ ಲಿಂಗಾಂಗಿಗಳು ಹರ್ಷದಿಂದ ಜಯಘೋಷದೊಡನೆ ಕರತಾಡನ ಮಾಡಿದರು. ಉತ್ಸಾಹ, ಆನಂದ, ಮಂಗಲ!

ಆ ಮೇಲೆ ನಡೆದ ಪ್ರಸಾದ ಸಂತೃಪ್ತಿಯು ಸಹಸ್ರ ಮಹಮನೆಯ

ಶರಣರನ್ನು ಅಲ್ಲಿಗೆ ಕಳಿಸುವ ಉತ್ಸವ ಏರ್ಪಟ್ಟಿತು. ಮುಂದೆ ವಾದ್ಯ ವೈಭವ, ಬಳಿಕ ನೂತನ ಲಿಂಗಧಾರಿ ಶರಣರು, ಅವರು ತಮ್ಮ ಹಿಂದೆ ಬರುತ್ತಿದ್ದ ಶರಣೆಯರು ಹಾಡುತ್ತಿದ್ದ ವಚನಗೀತೆಗಳನ್ನು ಪಠಿಸುತ್ತ ಎರಡು ಸಾಲಾಗಿ ನಡೆದಿದ್ದರು. ಅವರ ಹಿಂದೆ ಮಹಮನೆಯ ಶರಣರು, ಅವರ ಮಧ್ಯದಲ್ಲಿ ರುದ್ರಮುನಿದೇವರು ಚೆನ್ನಬಸವೇಶ್ವರರು, ಎಲ್ಲರೂ ಪಾದಚಾರಿಗಳಾಗಿ ನಡೆದಿದ್ದಾರೆ, ಆ ಓಣಿಯಗಲದ ಜನರೆಲ್ಲರೂ ಅವರನ್ನು ಹಿಂಬಾಲಿಸಿ ಹಾಡುತ್ತ ಬಂದರು. ಅವರು ಅನುಭವಮಂಟಪದ ಸಾಯಂಕಾಲದ ಗೋಷ್ಠಿಯಲ್ಲಿದ್ದು ಆನಂದಿಸಿ, ತಮ್ಮ ಓಣಿಗೆ ಮರಳಿ ಬರಲು ರಾತ್ರಿಯಾಗಿತ್ತು.

ಇತ್ತ ಅಂದಿನ ಇಡೀ ದಿನ ಜ್ಞಾನಾನಂದಸ್ವಾಮಿಗಳ ಮಠದ ಉತ್ಸವದ ಸಿದ್ಧತೆ ಸ್ಥಗಿತಗೊಂಡಿತ್ತು. ಮರುದಿನವೂ ಅದು ಮುಂದುವರಿಯಲಿಲ್ಲ. ಬಹುಜನ ಕಾರ್ಯಕರ್ತರು ಬರಲೇ ಇಲ್ಲ. ವಿಶಾಲವಾದ ಹಂದರ ಹಾಕಲು ಸಂಗ್ರಹಿಸಿದ ಸಾಮಗ್ರಿಗಳು ಹಾಗೆಯೇ ಬಿದ್ದಿದ್ದವು. ಉಳಿದ ಕೆಲಸಗಳೂ ನಡೆಯುವ ಇಲ್ಲವೆ ಪೂರೈಸುವ ಲಕ್ಷಣಗಳು ಎಳ್ಳಷ್ಟೂ ಇರಲಿಲ್ಲ. ಅವರ ಮುಖ್ಯ ಅನುಯಾಯಿಗಳು ಮಾತ್ರ ಬಂದರು. ಅವರು ಕೂಡ ದೀಕ್ಷಾ ಸಮಾರಂಭದಲ್ಲಿ ಮಾತನಾಡಿದ ಎಳಹರಯದ ಚೆನ್ನಬಸವಣ್ಣನ ವಾಗ್ವೈಖರಿಯ ಬಗೆಗೆ, ಅವನು ಉಪದೇಶಿಸಿದ ಧರ್ಮತತ್ತ್ವಗಳ ಮಹತಿಯ ಬಗೆಗೆ, ಶರಣರ ಸರ್ವಾತ್ಮೈಕನಿಷ್ಠೆ ಸಮತೆಗಳ ಬಗೆಗೆ ಮಾತನಾಡುತ್ತ ಕುಳಿತರು. ಮಠದ ಉತ್ಸವದ ಮಾತು ಹಿಂದೆ ಬಿದ್ದುಹೋಯಿತು. ಎರಡನೆಯ ದಿನವೂ ಹಾಗೆಯೇ ಹೋಯಿತು. ಜ್ಞಾನಾನಂದಸ್ವಾಮಿಗಳು ದೀಕ್ಷಾಸಮಾರಂಭದಿಂದ ದೂರವಿದ್ದರೂ ಎಲ್ಲ ವಿಷಯಗಳು ಅವರ ಅವಗಾಹನೆಗೆ ಬಾರದೆ ಹೋಗಿರಲಿಲ್ಲ. ಅವರೂ ವಿದ್ಯಾವಿಭೂಷಿತರು. ಈಗ ಕಿವಿಯಾರೆ ಕೇಳುತ್ತಿದ್ದ ಅನುಯಾಯಿಗಳ ಮಾತುಗಳೂ ಅವರ ಮರ್ಮವನ್ನು ಭೇದಿಸಿದವು. ಅತ್ತ ಶಿಷ್ಯರ ಸಂದೋಹವೂ ಸರಿದು ಹೋಗಿತ್ತು. ಅವರ ಪಲ್ಲಕ್ಕಿ ಉತ್ಸವಗಳ ಮೋಹಾಂಧಕಾರದ ತೆರೆ ಹರಿಯಿತು. ಅರಿವು ಕಣ್ದೆರೆಯಿತು, ಅಂದಿನ ರಾತ್ರಿಯೆಲ್ಲ ಅಂತರಂಗದಲ್ಲಿ ವಿಚಾರಿಸಿ ಒಂದು ನಿರ್ಧಾರಕ್ಕೆ ಬಂದರು. ಮೂರನೆಯ ದಿನ ಮುಂಜಾನೆ ಅವರು ಅಲ್ಲಿಯ ಪ್ರಮುಖರನ್ನು ಬರಹೇಳಿ ಕೊಂಡು ತಮ್ಮ ನಿರ್ಣಯ ತಿಳಿಸಿಬಿಟ್ಟರು. ಅದೊಂದು ಅಪೂರ್ವ ಮಾನಸಿಕ ಉತ್ಕ್ರಾಂತಿ! ಅದನ್ನು ಕೇಳಿದ ಓಣಿಯ ಶಿವಭಕ್ತರೆಲ್ಲ ಬಂದು ಮಠದಲ್ಲಿ ಕೂಡಿದರು. ಅಂದಿನ ಪಟ್ಟಭದ್ರೋತ್ಸವದ ಬದಲಾಗಿ ಬೇರೆ ಶಿವಕಾರ್ಯ

ಕ್ರಮಗಳ ಯೋಜನೆಯಾಯಿತು.

ಬೇಗಿನ ಹೊತ್ತಿನಲ್ಲಿ ವಚನಗೀತೆಗಳನ್ನು ಹಾಡುತ್ತ ನಡೆದಿರುವ ಅಲ್ಲಿಯ ಅಂಸಖ್ಯಾತ ಶಿವಭಕ್ತರನ್ನು ಮುಂದುಮಾಡಿಕೊಂಡು, ಜ್ಞಾನಾನಂದ ಸ್ವಾಮಿಗಳು ಬರಿಗಾಲಿನಿಂದ ನಡೆಯುತ್ತ ಮಹಮನೆಗೆ ಬಂದರು. ಅನುಭವಗೋಷ್ಠಿಯಲ್ಲಿ ಶರಣರಿಗೆ ಶರಣಾಗತರಾದರು. ಬಸವೇಶ್ವರ ಮೊದಲಾಗಿ ಹಿರಿಯ ಶರಣರು ಮುಂದಕ್ಕೆ ಬಂದು ಅವರನ್ನು ಬರಮಾಡಿಕೊಂಡರು.

ಮರುದಿನ ಮಹಮನೆಯಲ್ಲಿ ಜ್ಞಾನಾನಂದ ಸ್ವಾಮಿಗಳಿಗೆ ಇಷ್ಟಲಿಂಗ ಧಾರಣದೀಕ್ಷೆಯಾಯಿತು. ಅವರ ತನುಮನಭಾವಗಳು ಪರಿಶುದ್ಧವಾದವು. ಮೊದಲೇ ಅವರು ಶಾಸ್ತ್ರಜ್ಞರು. ಬೇಗನೆ ಅವರಿಗೆ ಮಾಹೇಶ್ವರ ದೀಕ್ಷೆಯಾಗಿ ಶರಣರ ಇಚ್ಛೆಯಂತೆ, ಆದೇಶಕ್ಕೆ ಷಟ್‌ಸ್ಥಲೋಪದೇಶದ ಗುರುಗಳೆಂದು ಯೋಜಿಸಲ್ಪಟ್ಟರು. ಅವರೂ ಷಟ್‌ಸ್ಥಲ ತತ್ತ್ವಪ್ರಚಾರವನ್ನು ಕೈಕೊಂಡರು. ಅಲ್ಲಿಗೆ ಕಲ್ಯಾಣದಲ್ಲಿರುವ ೧೦೮ ಶೈವಮಠಗಳು ವೀರಶೈವಮಠಗಳಾದವು. ಕಲ್ಯಾಣಕ್ಕೆ ಬರುತ್ತಿರುವ ಲಕ್ಷಾವಧಿ ಜಂಗಮರ ಜಿಜ್ಞಾಸುಗಳ ಪ್ರಸಾದ ವ್ಯವಸ್ಥೆಯನ್ನು ಆ ಮಠಗಳ ವ್ಯವಸ್ಥಾಪಕರೂ ಹಂಚಿಕೊಂಡು ನಿರ್ವಹಿಸಹತ್ತಿದರು. ಇದರಿಂದ ಮಹಮನೆಯ ಕಾರ್ಯಭಾರಕ್ಕೆ ದೊಡ್ಡ ಸಹಾಯವೊದಗಿತು.

ಜ್ಞಾನಾನಂದ ಸ್ವಾಮಿಗಳು ಪ್ರಭುದೇವರಿಗಾಗಿ ಒಂದು ಮಠವನ್ನು ಕಟ್ಟಿಸಿದರೆಂದು ಹೇಳುತ್ತಾರೆ. ಈಗಲೂ ಬಸವಕಲ್ಯಾಣದಲ್ಲಿರುವ 'ಪ್ರಭುದೇವರ ಗದ್ದುಗೆ(ಮಠ)' ಎಂಬ ಪುನರ್ನಿರ್ಮಿತ ಸುಭದ್ರ ಕಟ್ಟಡವೇ ಇದಾಗಿರಬಹುದು.

---

## ೫. ಜ್ಞಾನಸೂರ್ಯನ ಸನ್ನಿಧಿಯಲ್ಲಿ

ಮುಂಜಾನೆ ಮೂರುಗಳಿಗೆ ಹೊತ್ತು ಏರಿದೆ. ಮಹಮನೆಯ ಎದುರಿಗೆ ಸ್ವಲ್ಪದೂರದಲ್ಲಿ ಇಬ್ಬರು ಶಿವಯೋಗಿಗಳು ಬಂದು ನಿಂತುಕೊಂಡಿದ್ದಾರೆ. ಅವರು ಮಹಾದ್ವಾರದಿಂದ ಕಾಣುವ ಒಳಅಂಗಳವನ್ನು ನೋಡಿ ಮಾತನಾಡುತ್ತಿದ್ದಾರೆ. ಅಂಗಳದಲ್ಲಿ ಗಣತಿಂಥಿಣಿ ಎಡೆಬಿಡದೆ ಎಡೆಯಾಡುತ್ತಿದೆ. ಇದನ್ನು ಕಂಡ ಇವರ ಹೃದಯಕಮಲಗಳು ಅರಳಿವೆ. ಕಣ್ಣಂಚಿನಲ್ಲಿ ಆನಂದದ ಬೆಳಕು ಹೊಳೆದಿದೆ.

"ನೋಡಯ್ಯಾ, ಶಿವಲೋಕವಿದು, ಇವರೆಲ್ಲ ರುದ್ರಗಣಂಗಳು, ಸಮಸ್ತ ತೀರ್ಥಕ್ಷೇತ್ರಂಗಳು ಈ ಅಂಗಳದಲ್ಲಿ! ಇಂತಿರುವ ಶರಣ ಸಂಗನಬಸವಣ್ಣನ ಅಂಗಳವ ಕಂಡು ಕಂಗಳ ತೃಪ್ತಿಯಾಯಿತ್ತು, ಕಂಡಯ್ಯಾ!"

"ನಿಜ ಪ್ರಭು, ನೀನಿಷ್ಟು ಒಲಿದಲ್ಲಿ ಎಲ್ಲ ಪಾವನವೂ ಇಲ್ಲಿ ಇರುವದು ಅಚ್ಚರಿಯೇನಲ್ಲ!"

"ಎನ್ನ ಮನವು ಉಬ್ಬಿಕೊಬ್ಬಿ ಓಲಾಡುತ್ತಿದೆ. ನಮ್ಮ ಗುಹೇಶ್ವರನ ಶರಣ ಸಂಗನಬಸವಣ್ಣನ ದಾಸೋಹದ ಘನವನೇನೆನ್ನಬಹುದು."

"ಹಿಂದೆ ಹಲವು ಪುರಾತನರು ಮಹಮನೆಯ ಕಟ್ಟಿದರು......"

"ಅವರೆಲ್ಲ ಕಟ್ಟಿ ಕೈಲಾಸಕ್ಕೆ ಒಕ್ಕಲು ಹೋದರು ಮಾತ್ರ!"

"ಹೌದು ದೇವಾ, ಅದನ್ನೇ ಹೇಳುತ್ತಿದ್ದೆ ನಾನೂ, ನಮ್ಮ ಶರಣ ಬಸವಣ್ಣ ಕಲ್ಯಾಣಕ್ಕೆ ಬಂದು ಮಹಮನೆಯ ಕಟ್ಟದರೆ ಮರ್ತ್ಯಲೋಕವೆಲ್ಲ ಭಕ್ತಿಸಾಮ್ರಾಜ್ಯವಾಗಲಿದೆ."

ಅವರಿಬ್ಬರು ಮುಂದಕ್ಕೆ ಬಂದು ದ್ವಾರವಟ್ಟದ ಮುಂದೆ ನಿಂತರು. ಸಾವಿರ ಕಾವಿಯ ಯೋಗಿಗಳು ಅಲ್ಲಿ ನಿತ್ಯ ಅಲೆದಾಡುತ್ತಿರುವದರಿಂದ ಬೀದಿಯ ಜನರಾರೂ ಈ ಮಹಾಶಿವಯೋಗಿಗಳತ್ತ ಗಮನಕೊಟ್ಟಿರಲಿಲ್ಲ. ಆದರೆ ಅಪ್ಪಣ್ಣ ಶರಣನು ಒಳಗಿನಿಂದಲೇ ನೋಡಿ, ಅವರ ಅಂಗಾಂಗಗಳಲ್ಲಿ ಸ್ಫುರಿಸುವ ತಪಸ್ತೇಜವನ್ನು ಗುರ್ತಿಸಿದನು. ತ್ವರಿತವಾಗಿ ಒಳಗೆ ಹೋಗಿ, ಶಿವಲಿಂಗಾರ್ಚನೆಯಲ್ಲಿರುವ ಬಸವರಾಜರಿಗೆ ಅರಿಕೆ ಮಾಡಿದನು: "ಇಬ್ಬರು ಮಹಾನುಭಾವರು ಬಾಗಿಲಲ್ಲಿ ಬಂದು ನಿಂತಿದ್ದಾರೆ. ಅವರು ಸಾಮಾನ್ಯ ಜಂಗಮರಂತಿಲ್ಲ. ಪರಶಿವನ ದೃಶ್ಯಾದೃಶ್ಯರೂಪಗಳಂತಿದ್ದಾರೆ.'

ಕಾಯದ ಕೈಯಲ್ಲಿ ಲಿಂಗ, ಪ್ರಾಣದ ಕೈಯಲ್ಲಿ ಜಂಗಮ, ಉಭಯ ಒಂದಾಗಿ ಪರಮಾನಂದ! ಆ ಆನಂದ ಸುಖದಲ್ಲಿ ಲೋಲಾಡುತ್ತಿದ್ದ ಬಸವಣ್ಣನವರು: "ಜಂಗಮದೇವರನ್ನು ಬಿಜಯಂಗೈಸಿಕೊಂಡು ಬಾ. ಕರುಣೆಯಿಂದ ಬರಹೇಳು" ಎಂದರು.

ಅಪ್ಪಣ್ಣ ಬಂದು "ಸ್ವಾಮೀ, ಶಿವಲಿಂಗಾರ್ಚನೆಯಲ್ಲಿದ್ದಾರೆ ಬಸವಣ್ಣನವರು. ಒಳಗೆ ದಯಮಾಡಿಸಬೇಕೆಂದು ಬಿನ್ನವಿಸಿದ್ದಾರೆ. ಭಕ್ತಕಾಯನಾದ ಜಂಗಮ ತನ್ನ ಮನೆಗೆ ತಾ ಬರಬೇಕು" ಎಂದು ಕೈಮುಗಿದು ಬಿನ್ನವಿಸಿದನು. ಅದಕ್ಕೆ ಬಂದ ಉತ್ತರ ಇದು:

"ಹಾಗೆ ಹೇಳುವ ಭಕ್ತನು ಬಿನ್ನವಿಸುವದೆಂದರೆ ಅದೊಂದು ಕೊರತೆ! ಕಾಯದ ಕೈಯಲ್ಲಿ ಕುರುಹಿನ ಕೈ ಇರುವಾಗ ಮಾತಿನ ಅದ್ವೈತದಿಂದೇನು?

ಬಾಗಿಲಲ್ಲಿ ಜಂಗಮ ಬಂದು ನಿಂತಿರುವಾಗ ಒಳಗೆ ಲಿಂಗಾರ್ಚನೆಯ ಮಾಡು ವದು ಏತರ ಭಕ್ತಿ? ಬಂದ ಜಂಗಮದ ಇಂಗಿತವನರಿದು ಇದಿರೆದ್ದು ವಂದಿಸಿ ಕಿಂಕರನಾಗಿರಬಲ್ಲಡೆ ಅದು ಭಕ್ತಿ! ಅದು ದಾಸೋಹಭಾವ!"

ಮಾತಿನ ಮರ್ಮ ಅಪ್ಪಣ್ಣನಿಗೆ ತಿಳಿಯಿತು, ಭೀತಿಯಾಯಿತು. ಮತ್ತೆ ಒಳಗೆ ಓಡಿದ.

ಒಳಅಂಗಳದಲ್ಲಿ ಬಲಬದಿಗೆ ಅನುಭವಮಂಟಪದ ಕಾರ್ಯದರ್ಶಿಯ ಕಾರ್ಯಾಲಯವಿತ್ತು. ಅಲ್ಲಿ ಕಾರ್ಯನಿರತರಾಗಿದ್ದ ಚೆನ್ನಬಸವಣ್ಣನವರು ಅಪ್ಪಣ್ಣ ಆತುರಾತುರವಾಗಿ ಅಲೆದಾಡುವದನ್ನು ಗಮನಿಸಿದರು. ಬಾಗಿಲ ಡೆಗೆ ಅವರ ದೃಷ್ಟಿಹರಿಯಿತು, ಚಕ್ಕನೆದ್ದು ಕೋಣೆಯಿಂದ ಹೊರಗೆ ಬರು ತ್ತಿರಲು ಇವರ ಹಾಗು ಆ ಜಂಗಮಪ್ರಭುವಿನ ದೃಷ್ಟಿಗಳು ಸಹಜವಾಗಿ ಸಮ್ಮಿಲಿತವಾದವು. ಅನುಭವಮಂಟಪಕ್ಕೆ ಜ್ಞಾನಸೂರ್ಯನೊಬ್ಬನ ಉದಯ ವನ್ನು ಬಯಸಿ ಚಿಂತಿಸುತ್ತಿದ್ದ ಚೆನ್ನಬಸವಣ್ಣನವರ ಒಳಬಗೆಯಲ್ಲಿ ಬೆಳಕು ಮೂಡಿತು. ಅವರು ಕೈಮುಗಿದು ತಲೆವಾಗಿ ಬಾಗಿಲ ಹೊರಗೆ ಬಂದು ಯೋಗಿ ಗಳಿಗೆ ಶರಣೆಂದು ವಂದಿಸಿ "ದೇವರು ಒಳಗೆ ದಯಮಾಡಿಸಬೇಕು. ಡಣ್ಣಾ ಯಕರು ಇಷ್ಟರಲ್ಲಿ ಬರುವರು," ಎಂದರು.

"ಏನಯ್ಯಾ, ಜಂಗಮದ ಕಾಯ ಭಕ್ತನಾದರೆ ಭೃತ್ಯಾಚಾರವಿರಬೇಕು. ಪ್ರಾಣಜಂಗಮವಾದರೆ ಅರಿವಿರಬೇಕು; ಇಂತೀ ಭಕ್ತಿಜ್ಞಾನವುಳ್ಳವನಾದರೆ, ನಿನ್ನ ಗುರು ಬಸವಣ್ಣನಿಗೆ ಭಕ್ತನೆಂಬೆ! ಆನಾಗದ ಮುನ್ನ ತಾನಾದೆನೆಂಬವ ರಲ್ಲಿ ಗುಹೇಶ್ವರನು ಸುಳಿಯನು ಕಂಡಯ್ಯಾ,"

ಪ್ರಭುದೇವ ಮುಖ ತಿರುವಿ ನಿಂತರು. ಬಂದವರು ಯಾರೆಂಬವನ್ನು ಚೆನ್ನಬಸವಣ್ಣನವರು ಗುರುತಿಸಿದರು. ಅವರು ಒಳಗೆ ಧಾವಿಸಿದರು: ಪೂಜಾ ಮಂದಿರವನ್ನೇ ಪ್ರವೇಶಿಸಿದರು. ಬಸವಣ್ಣನವರಿಂದ ಅಚಾತುರ್ಯವಾಯಿ ತೆಂಬದು ಅವರ ಮನಕ್ಕೆ ಹೊಳೆದಿತ್ತು, ಆದ್ದರಿಂದ ಗುರುವಿನೆಡೆಯಲ್ಲಿ ದಿಟ್ಟವಾಗಿಯೇ ಹರಿಯಿತು ಅವರ ವಾಣಿ!

"ಪ್ರಭುದೇವರು ಸಿದ್ಧರಾಮಯ್ಯನವರು ಬಾಗಿಲಲ್ಲಿ ಬಂದು ನಿಂತಿರು ವಾಗ ಪೂಜೆಯ ಅಟ್ಟಹಾಸದಲ್ಲಿ ಅರುವುಮರವಾಗಿರುವದು ನಿಮಗೆ ಯೋಗ್ಯವೇ ಬಸವಣ್ಣ? ಲಿಂಗಜಂಗಮವೊಂದೆಂಬದು ನಿಮ್ಮ ನಚ್ಚಿನ ನಿಲವು ಅಲ್ಲವೇ? ಲಿಂಗಪ್ರಾಣಿಯಾಗಿದ್ದಂತೆ ಜಂಗಮಪ್ರಾಣಿಯೂ ನೀವು! ಕರದ ಇಷ್ಟಲಿಂಗವಾಗಿ ಪೂಜೆಗೊಳ್ಳ ಸಂಗಮನಾಥ ಅಂಗವೆತ್ತು ಮಹಮನೆಗೆ ಬಂದರೆ ಮೈಮರೆತಿರಬೇಕೇ? ಕಣ್ಣು ತೆರೆದಿದ್ದರೂ ಕಾಣಿಸಬಾರದೇ?

ಬಸವಣ್ಣನವರ ಅರಿವಿನ ಕಣ್ಣು ತೆರೆಯಿತು, "ತಪ್ಪಿದೆ ಚೆನ್ನಬಸವಣ್ಣಾ, ಸಂಗಮನಾಥನನ್ನು ತಂದು ಕೊಡು. ನಿಮ್ಮ ಚಮ್ಮಾವುಗೆಯ ತಲೆಯಲ್ಲಿ ಧರಿಸುವೆ" ಎನ್ನುತ್ತ ಅಣ್ಣನವರು ಎದ್ದರು.

"ಓಹೋ ಗುರುವೆ ನಿಮ್ಮ ಚಮ್ಮಾವುಗೆಯು ಬಂಟ ನಾನು! ಸಂಗಮನಾಥ ನಿಮ್ಮ ಮನವ ನೋಡಲೆಂದು, ತಮ್ಮ ಮನವನ್ನು ಅಡ್ಡಲಿಕ್ಕಿ ಮಾಡಿದ ಲೀಲೆ ನಿಮಗೆ ಸಹಜವೆನಿಸಹುದೇ? ಅಂಜಲೇಕೆ? ಅಳಕಲೇಕೆ? ಮಂಜಿನ ಒಡ್ಡು ರವಿಕಿರಣವ ಕೆಡಿಸಲುಂಟೇ? ನಿಮ್ಮ ಅರಿವಿಂಗೆ ಕೇಡುಂಟೇ? ನನ್ನ ಮನ ನಿಮ್ಮಡಿಗೆ ಪಾದುಕೆ! ನಡೆಯಬೇಕು,"

ಅಹಂಕಾರದ ಮರವೆಗಾಗಿ ಪಶ್ಚಾತ್ತಾಪಪಡುತ್ತ ಬಸವಣ್ಣನವರು ಬಂದು ಜಂಗಮದೇವರ ಪಾದಗಳ ಮೇಲೆ ಹೊರಳಿದರು. ಶರಣರ ಸಮೂಹ ಅವರನ್ನು ಹಿಂಬಾಲಿಸಿತ್ತು.

"ಎನ್ನ ಗತಿಮತಿ ನೀನೆ: ಎನ್ನಗುರು ಪರಮಗುರು ನೀನೆ! ಎನ್ನ ಅಂತರಂಗದ ಜ್ಯೋತಿ ನೀನೆ! ಕೂಡಲಸಂಗಮ ದೇವಾ ನಾನು ನಿಮ್ಮ ಶರಣನೆಂಬುದ ನಿಮ್ಮಶರಣ ಸಿದ್ಧರಾಮಯ್ಯನವರು ಬಲ್ಲರು. ಕೃಪೆಮಾಡು" ಎಂದು ಅಣ್ಣನವರು ಬೇಡಿಕೊಂಡರು.

ಬಸವಣ್ಣನವರ ಭಕ್ತಿಯಲ್ಲಿಯ ಅಷ್ಟಿಷ್ಟು ದೋಷಗಳನ್ನು ತಿಳಿಸಿ ದೂರೀಕರಿಸದಿದ್ದರೆ ಅಖಂಡವಾದ ಅವರ ತ್ಯಾಗ, ಲೋಕಸೇವೆ, ಸಾಧನಗಳೆಲ್ಲ ವ್ಯರ್ಥವಾದಾವೆಂದು ಪ್ರಭುವಿಗೆ ಚಿಂತೆ! ಆದ್ದರಿಂದ ಅಣ್ಣನವರ ಹಮ್ಮುಭಿಮಾನಗಳನ್ನು ಮತ್ತೆ ಮತ್ತೆ ಕೆದಕಿ ನುಡಿದರು

"ಲಿಂಗದ ಪ್ರಾಣ ಜಂಗಮವೆಂದು ತಿಳಿದವನು ಬಾಗಿಲಲ್ಲಿ ಜಂಗಮ ಬಂದು ನಿಂತಾಗ ಒಳಗೆ ಹಮ್ಮಿನಿಂದ ಕುಳ್ಳಿರುವದೇ? ಬಸವಣ್ಣಾ ಇಂತಹ ಆಡಂಬರದ ಭಕ್ತರಮನೆಗೆ ಹೋಗುವ ಜಂಗಮ ಅಜ್ಞಾನಿ!"

"ನನ್ನ ತಪ್ಪು ಅನಂತಕೋಟಿ; ನಿಮ್ಮ ಸೈರಣೆಗೆ ಲೆಕ್ಕವಿಲ್ಲ!"

"ನಮ್ಮ ಸೈರಣೆಯಿಂದ ನಿಮಗೇನಾಗಬೇಕಾಗಿದೆ ಬಸವಣ್ಣಾ? ತನು ಮನ ಧನ ನೀಡುವೆನೆಂಬ ನಿನ್ನ ನುಡಿ ದೂರ ಕೇಳಬರುತ್ತದೆ. ಅವು ಯಾರ ಒಡವೆಗಳು? ಚತುರ್ದಶ ಭುವನಂಗಳೆಲ್ಲವು ಲಿಂಗದೊಡವೆ. ತನು ಮನಧನಗಳು ಗುಹೇಶ್ವರನ ಸೊಮ್ಮು! ನೀನೇನ ಕೊಟ್ಟು ಭಕ್ತನಾದೆ ಹೇಳು?"

"ನನ್ನ ನುಡಿ ನನಗೆ ನಂಜಾಯಿತು. ಕ್ಷಮಿಸು ತಂದೆ!"

ಅಣ್ಣನವರ ಮೈ ಬೆವರಿತ್ತು. ಬೇಡಿದವರಿಗೆ ಬೇಡಿದ್ದನ್ನು ಇತ್ತು ಕೃತಾರ್ಥನಾಗುವೆನೆಂಬ ಹೆಬ್ಬಯಕೆ ಲಯವಾಗಿತ್ತು. ಶರಣರೆಲ್ಲರು ಅವರ ಅವಸ್ಥೆಗೆ

ಮರುಕಗೊಂಡರು. ಚೆನ್ನಬಸವಣ್ಣನವರು ತಮ್ಮ ಷಟ್‌ಸ್ಥಲ ದರ್ಶನದ ನಿರ್ಮಿ
ತಿಗೆ ಬೆಳಕನೀವ ಜ್ಞಾನ ರವಿ ನಿಜವಾಗಿ ಬಂದಿರುವನೆಂದು ಅರಿತರಿತು ಒಳ
ಹರ್ಷಗೊಂಡಿದ್ದರು. ಆದರೆ ಪ್ರಸ್ತುತದಲ್ಲಿ ಗುರುಬಸವಣ್ಣನವರು ಸತ್ವಪರೀಕ್ಷೆ
ಸಿಕ್ಕು ಚಡಪಡಿಸುತ್ತಿರುವುದನ್ನು ನೋಡಿ ಸುಮ್ಮನಿರಬೇಕೆ? ಮೊದಲು ಅವ
ಬೆಂಬಲಕ್ಕೆ ಬರಬೇಕಾಗಿತ್ತು. ಪ್ರಭುವನ್ನು ಪ್ರಾರ್ಥಿಸಿದರು:

"ಶರಣು ಶರಣಾರ್ಥಿ ಮಹಾದೇವಾ, ಪರಬ್ರಹ್ಮಸ್ವರೂಪಾ ಶರಣು
ನಿರಾಕಾರ ತತ್ತ್ವವೇ ಪ್ರಭುದೇವಾ ನಿಮ್ಮ ಚರಣಕ್ಕೆ ಶರಣಯ್ಯಾ! ಪ್ರಭುವೇ,
ನಿನ್ನ ಕಾಯಪ್ರಾಣಗಳೇ ಬಸವಣ್ಣನ ಕಾಯಪ್ರಾಣಗಳು; ಬಸವಣ್ಣನ ಕಾಯ
ಪ್ರಾಣಗಳೇ ನಿನ್ನ ಕಾಯಪ್ರಾಣಗಳು. ನೀನಿಲ್ಲದೆ ಬಸವಣ್ಣನಿಲ್ಲ; ಬಸವಣ್ಣ
ನಿಲ್ಲದೆ ನೀನಿಲ್ಲ. ಬಸವಣ್ಣನು ಯಾರೆಂಬುದನ್ನು ಅರಿದು ನೋಡಬೇಕು
ಪ್ರಭುವೇ. ಸಂತೆಯ ನೆರವಿಯಲ್ಲಿ ಅಭಿಮಾನದ ಮಾತನಾಡಬಹುದೇ? ಬೀದಿ
ಯಲಿ ನಿಂದು ನುಡಿವ ಅನುಭಾವದ ರಚ್ಚೆ ನಗೆಗೇಡೆ ನೋಡಯ್ಯಾ! ಬಸವಣ್ಣ
ನಲ್ಲಿ ನಿಮ್ಮಲ್ಲಿ ಭೇದವಿಲ್ಲ ಎಂಬುದನ್ನು ಅರಿತಮೇಲೆಯೂ ಬಾರವೇಬ
ಮುನಿಸು ಬಲ್ಲವರಿಗೆ ಉಚಿತವೇ ಪ್ರಭುವೇ?"

ಚೆನ್ನಬಸವಣ್ಣನವರ ಬಿನ್ನಹಕ್ಕೆ ಪ್ರಭು ಮೆಚ್ಚಿದ್ದರು. ಆದರೂ ಉತ್ತ
ರಿಸದೆ, ಗಂಭೀರವಾಗಿ ಗಗನದತ್ತ ನೋಡುತ್ತ ನಿಂತಿದ್ದರು. ಸಿದ್ಧರಾಮಯ್ಯನ
ವರಿಗೆ ತಳಮಳವಾಯಿತು, ಅವರೆಂದರು:

"ಆದಿ ಅನಾದಿಯಲ್ಲಿ ಬಸವಣ್ಣನೇ ಭಕ್ತ, ನೀನೆ ಜಂಗಮ,
ಈ ಉಭಯ ಭಾವದಲ್ಲಿ ಭೇದವುಂಟೇ?
ಕಪಿಲಸಿದ್ಧಮಲ್ಲಿಕಾರ್ಜುನಾ, ಬಸವಣ್ಣನಾರೆಂಬುದನ್ನು
ನಿಮ್ಮಲ್ಲಿ ನೀವೇ ತಿಳಿದು ನೋಡಿ ಕೃಪೆಮಾಡಾ ಪ್ರಭುವೆ"

ಇತ್ತ ಚೆನ್ನಬಸವಣ್ಣನವರು ಬಸವಣ್ಣನವರನ್ನು "ಪ್ರಭುಗಳು ಆತಿ
ಥ್ಯಕ್ಕೆ ಬಂದವರಲ್ಲ; ಭಕ್ತಿಪಥವ ತಿದ್ದಲು ಬಂದವರು. ಅವರನ್ನು ಆತ್ಮಾ
ರ್ಪಣದಿಂದ ಒಲಿಸಬೇಕು" ಎಂದು ಸೂಚಿಸಿ ಎಚ್ಚರಿಸಿದರು.

ಅಣ್ಣನವರು: "ತಂದೆ, ತನುಮನಧನಗಳನ್ನು ಕೊಟ್ಟೆನೆಂದು ನುಡಿದು
ಗುರುಲಿಂಗಜಂಗಮಕ್ಕೆ ದೂರವಾದೆನು. ನಿಮಗೆ ಮಾಡಿಹೆನೆಂದು ನುಡಿದ
ಕೇಡಿಂಗೆ ಕಡೆಯಿಲ್ಲ" ಎಂದು ಪ್ರಭುವನ್ನು ಕುರಿತು ಹೇಳುವಾಗ ಅವರ
ಕಣ್ಣೀರು ಧಾರೆಯಾಗಿದ್ದವು ಕಂಠ ಬಿಗಿದಿತ್ತು. ಮತ್ತೆ:

"ಮಾಡುವಾತ ನಾನಲ್ಲವಯ್ಯಾ, ನೀಡುವಾತ ನಾನಲ್ಲವಯ್ಯಾ,
ಬೇಡುವಾತ ನಾನಲ್ಲವಯ್ಯಾ ನಿಮ್ಮ ಕಾರುಣ್ಯವಲ್ಲದೆ,

ಮನೆಯೊಡತಿ ಮಾಡಿಕೊಂಬಂತೆ ನಿನಗೆ ನೀಮಾಡಿಕೋ"

ಎಂದು ತಲೆವಾಗಿ ಬೇಡಿಕೊಂಡರು. ಅಲ್ಲಿಗೆ ಪ್ರಭುವಿನ ಮೊಗ ನಗೆ ಗೂಡಿತು; ನಾಟಕ ಬಯಲಾಯಿತು.

"ಕೀರ್ತಿವಾರ್ತೆಗೆ ಮಾಡುವ ಭಕ್ತ ತಪ್ಪಿದರೆ
ಅದ ಮನಕ್ಕೆ ತರಲಿಲ್ಲ.
ಸಜ್ಜನ ಸದ್ಭಕ್ತನೆಡಹಿದರೆ ಅದ ಸೈರಿಸಬಾರದು ಕೇಳಾ,
ನಮ್ಮ ಗುಹೇಶ್ವರ ಲಿಂಗಕ್ಕೆ ಆದಿಯಿಂದತ್ತ ನೀನೆ ಭಕ್ತನಾದ
ಕಾರಣ ಮನ ನೊಂದಿತ್ತು ಕಾಣಾ ಸಂಗನಬಸವಣ್ಣಾ"

ಎಂದ ಪ್ರಭು ಶರಣರನ್ನು ನೋಡಿ ಮತ್ತೆ:

"ತನುಮನಧನಗಳ ಗೆಲಬರಿಯದೆ ಭ್ರಮೆಗೊಂಡಿದೆ ಲೋಕವೆಲ್ಲ.
ತನುವ ದಾಸೋಹಕ್ಕೆ ಮನವ ಲಿಂಗಕ್ಕೆ ಧನವ ಜಂಗಮಕ್ಕೆ
ಸವಿಸಿ ಗೆಲಬಲ್ಲಡೆ ಬಸವಣ್ಣನಲ್ಲದೆ ಮತ್ತಾರನೂ ಕಾಣೆ!
ಗುಹೇಶ್ವರನ ಶರಣಸಂಗನಬಸವಣ್ಣನಿಗೆ ನಮೋ ನಮೋ ಎನ್ನುವೆ"

ಪ್ರಭುದೇವ ಕೈ ಮುಗಿದಾಗ ಶರಣರೆಲ್ಲ ತಲೆವಾಗಿ ಕೈಮುಗಿದರು, 'ನಡೆ ವಳಿಯಲೇ,ನಾದಡಾಗಲಿ, ನುಡಿವಳಿಯಲತಿ ಜಾಣರಾದರಿವರು ಬಾರಯ್ಯಾ ಎಂದು ನಗುತ್ತ ಪ್ರಭು ಸಿದ್ಧರಾಮಯ್ಯನೊಡನೆ ಮಹಮನೆಯಲ್ಲಿ ಅಡಿ ಯಿಟ್ಟರು.

• • •

ಮರುದಿನ ಮುಂಜಾವು ಶರಣರ ವಿಚಾರಸಮಿತಿಯ ಸಭೆಯಲ್ಲಿ ಪ್ರಭುದೇವರಿರುವರೆಂದು ತಿಳಿದಿತ್ತು. ಅದರಿಂದ ಸಮಿತಿಯ ಸದಸ್ಯರಲ್ಲದ ವರೂ ಸೇರಿ ಅದು ದೊಡ್ಡ ಸಭೆಯಾಯಿತು. ಅಷ್ಟರಲ್ಲಿ ಸಿದ್ಧರಾಮಯ್ಯ ನಿಗೆ ಇಷ್ಟಲಿಂಗವಿಲ್ಲವೆಂಬುದು ಬಸವಣ್ಣ-ಚೆನ್ನಬಸವಣ್ಣನವರಿಗೆ ಗೊತ್ತಾಗಿತ್ತು: ಸಿದ್ಧರಾಮಯ್ಯನವರು:

"ಅಯ್ಯಾ ಪ್ರಭುದೇವಾ, ನನ್ನನ್ನು ಕರೆತಂದುದಕ್ಕೆ ಮುಖ್ಯವಾಗಿ ನೀನೊಲಿದ ಸಂಗನಬಸವಣ್ಣನ ಶ್ರೀಪಾದವ ಕಂಡು ಧನ್ಯನಾದೆನು. ಇನ್ನು ನಿಮ್ಮ ಕರಸ್ಥಲದ ಲಿಂಗವು ಪ್ರಾಣದಲ್ಲಿ ವೇಧಿಸುವದನ್ನು ತಿಳಿಸುವದಾಗಿ ಹೇಳಿದ್ದಿರಿ ಅದು ನಿಮ್ಮ ಇಷ್ಟ"

ಎನ್ನಲು ಪ್ರಭುದೇವರು ಬಸವಣ್ಣನವರ ಮುಖನೋಡಿದರು. ಇದೇ ಸಮಯವೆಂದು ಬಸವಣ್ಣನವರು ಎದ್ದು ಪ್ರಭುವಿಗೆ ಶರಣರಿಗೆ ಶರಣು ಹೇಳುತ್ತ ಎಂದರು:

"ದೇವಾ, ಸಮಯಾಚಾರದ ಇಂದಿನ ವಿನಯದಿಂದ ಮಾಡಿವೆ. ಕೊಂದರೆ

ಕೊಲ್ಲು, ಕಾಯ್ದರೆ ಕಾಯಿ.. ಸಿದ್ಧರಾಮಯ್ಯನವರನ್ನು ಎಮ್ಮವರೆಂದು ಮನ ಹಿಡಿಯದಂ"

ಸಭೆ ಗಂಭೀರವಾಗಿ ಅಲ್ಲಮಪ್ರಭುಗಳತ್ತ ನೋಡಿತು, ಚೆನ್ನಬಸವಣ್ಣನವರೂ ಆಕ್ಷೇಪಿಸಿದರು; "ಇಷ್ಟಲಿಂಗವಿಲ್ಲದ ಸಿದ್ಧರಾಮಯ್ಯನವರು ಅದೆಂತು ಶಿವಶರಣರ ಗುಂಪಿನಲ್ಲಿ ಸೇರುವರು?"

ಇಬ್ಬರ ವಾಣಿಗಳೂ ಮೊನೆಚಾಗಿದ್ದವು. ಆದರೆ ಎದೆಗಾರ ಯೋಗಿ ಸಿದ್ಧರಾಮನು ಅಳುಕದೆ ಉತ್ತರಿಸಿದನು:

"ಬೆಳಗು ಬೆಳಗು ಹಳಚುವಲ್ಲಿ ಕತ್ತಲೆ ಉಳಿಯದು. ಮಹಾನುಭವ ಗೋಷ್ಠಿಯ ಮಾಡುವ ಶರಣರ ಸಂಗದಲ್ಲಿ ಇದ್ದವರು ಅಜ್ಞಾನವಳಿದು ನಿಜವನ್ನೈದರೇ? ನಾನು ನಿಮ್ಮ ಸೋಂಕಿನ ಸುಖದಲ್ಲಿ ಮನಮಗ್ನನಾದವನು; ಒಳಗೆ ಚಿತ್ಕಳೆಯ ಕಂಡವನು. ಹೊರಗೆ ಲಿಂಗವ ಧರಿಸುವ ಹಂಗೇಕೆ?"

ಚೆನ್ನಬಸವಣ್ಣ ಮಾರುತ್ತರವಿತ್ತರು:

"ಅಂಗದಲ್ಲಿ ಲಿಂಗವಿಲ್ಲದನ್ನಕರ - ಪ್ರಾಣದಲ್ಲಿ - ಲಿಂಗದ ಪರಿಣಾಮವೆಂತಪ್ಪುದಯ್ಯಾ? ಅಂಗತ್ರಯವುಳ್ಳವರು ಲಿಂಗತ್ರಯ ಸಂಪನ್ನರಾಗಬೇಕು. ಒಂದೊಂದಂಗವ ವಿರಹಿತರಾಗಿಪ್ಪರುಂಟೇ?"

"ತನು-ಮನ-ಭಾವವೆಂಬ ತ್ರಿವಿಧವು ಏಕಾರ್ಥವಾದಬಳಿಕ ಆವ ತನುವಿನಲ್ಲಿ ಲಿಂಗಸ್ವಾಯತವ ಮಾಡುವೆ?"

"ಏಕಾರ್ಥವಾದುದರ ಕುರುಹು ಪ್ರಾಣಲಿಂಗಸಾಧನೆ. ಒಂದಂಗಕ್ಕೆ ಲಿಂಗವಿಲ್ಲದೆ ಅದು ಸಾಧ್ಯವಿಲ್ಲ."

"ತನು-ಮನ-ಭಾವಗಳು ಇದ್ದು ಇಲ್ಲದಂತಿವೆ."

"ಅದು ಭ್ರಮೆ! ಅವು ನಿತ್ಯಲಿಂಗವಾಗಬೇಕು. ಆಕಾಶದಲ್ಲಾಡುವ ಪಟಕ್ಕಾದರೂ ಕೆಳಗಿನ ಸೂತ್ರಬೇಕು. ನಡೆಯುವ ಬಂಡಿಗೂ ಭೂಮಿಯ ಆಧಾರಬೇಕು. ಬಂಡಿ ನಡೆಯಲು ಆ ಭೂಮಿಗೆ ಮಾರ್ಗಸಂಸ್ಕಾರ ಬೇಕು. ಭೂಮಿಯನೊಲ್ಲದೆ ಗಗನಕ್ಕೆ ಹಾರುವಂಗೆ ಅಲ್ಲಿ ನೆಲೆಯಿಲ್ಲ."

ಈ ತತ್ತ್ವಚಿಂತನೆ ಸರ್ವರಿಗೂ ಮನದಟ್ಟಾಗಲೆಂದು ಪ್ರಸಂಗವನ್ನು ಹಿಗ್ಗಿಸಬಯಸಿದರು ಪ್ರಭು! ನಡುವೆ ಪ್ರವೇಶಿಸಿ ಬೇಕಂತೆ ಕೇಳಿದರು:

"ಆಕಾಶವನಡರುವಂಗೆ ಅಟ್ಟುಗೋಲ ಹಂಗೇಕೋ?
ಸಮುದ್ರವ ಹಾರುವಂಗೆ ಹರಗೋಲ ಹಂಗೇಕೋ?
ಸೀಮೆಯ ಮೀರಿದ ನಿಸ್ಸೀಮಂಗೆ ಸೀಮೆಯ ಹಂಗೇಕೋ?
ಗುಹೇಶ್ವರ ಲಿಂಗದಲ್ಲಿ ನಿಸ್ಸೀಮ ಸಿದ್ಧರಾಮಂಗೆ

ಲಿಂಗವೆಂದರೇನು? ಹೇಳಾ ಚೆನ್ನಬಸವಣ್ಣಾ"

ಮಿಂಚಿನಂತೆ ಬಂದಿತು ಚೆನ್ನಬಸವಣ್ಣನವರ ಉತ್ತರ:

"ಕಣ್ಣು ಕಾಣುತ್ತದೆಂದರೆ ದೀಪವಿಲ್ಲದೆ ಕತ್ತಲೆಯಲ್ಲಿ
ಅದು ಕಾಣಬಹುದೇ?
ಸೂರ್ಯಪ್ರಕಾಶದಿಂದ ಪದಾರ್ಥವು ಕಾಣುವದಲ್ಲದೆ
ತನ್ನಿಂದಲೇ ಕಾಣುತ್ತದೆಂದು ಕಣ್ಣು ಹೇಳಬಹುದೇ?
ಸ್ಥೂಲ-ಸೂಕ್ಷ್ಮ-ಕಾರಣಗಳೆಂಬ ತನುತ್ರಯವಿರಲು
ಇಷ್ಟ-ಪ್ರಾಣ-ಭಾವಗಳೆಂಬ ಲಿಂಗತ್ರಯ ಬೇಡವೆಂದರೇ
ಅಸಂಖ್ಯಾತ ಪ್ರಮಥರು ಒಪ್ಪುವರೇ?
ಅಂಗಲಿಂಗ ಸಂಗವಿಲ್ಲದ ನಿಸ್ಸಂಗಿಯನ್ನು
ಕೂಡಲಚೆನ್ನಸಂಗಮದೇವ ಮೆಚ್ಚುವದಿಲ್ಲ."

ಚೆನ್ನಬಸವಣ್ಣನವರು ಪ್ರಮಥರ ಮುಖನೋಡಿದರು. ನಾನು ತಾನು ಎನ್ನುತ್ತ ಪ್ರಮಥರು ಅವರ ಬೆಂಬಲಕ್ಕೆ ಬಂದು ನುಡಿದರು, ಮೋಳಿಗೆಯ ಮಾರಯ್ಯ:

"ಕೈದುವಿಲ್ಲದ ಬಂಟ ಗರ್ಜಿಸಿದರೆ ಅಂಜಿದವರುಂಟೇ?
ಇಷ್ಟ, ಬಾಹ್ಯ, ದೃಷ್ಟವ ಮಾತನಾಡಿದರೆ,
ನೆಟ್ಟನೆ ಪ್ರಾಣಲಿಂಗಿಯಪ್ಪನೇ? ಇದು ನಿಶ್ಚಯವಲ್ಲ"
"ಇಷ್ಟದ ಪೂಜೆ ದೃಷ್ಟವಾಗಿ, ಆ ದೃಷ್ಟ ನಿಶ್ಚಯವಾದಲ್ಲಿ
ಪ್ರಾಣಲಿಂಗ ಸಂಬಂಧಿ......"
ಫಲದ ಮರೆಯ ರಸವ ಹಿಳಿದು ಕಾಬ ರಸರುಚಿಯಂತೆ
ಇಷ್ಟದ ಮರೆಯಲ್ಲಿಪ್ಪ ದೃಷ್ಟವನು.
ಉಭಯ ನಿಶ್ಚಯಿಸಿದಲ್ಲಿ ಪ್ರಾಣಲಿಂಗ ಸಂಬಂಧಿ"

ಮೆರೆ ಮಿಂಡ ದೇವ:

"ಮೊನೆ ಇರಿವರೆ ಕರದಲ್ಲಿ ಹಿಡಿದಲ್ಲದಾಗದು;
ಕ್ರಿಯಾನುಭಾವ ಶುದ್ಧವಾದಲ್ಲದೆ ಲಿಂಗವ ಕೂಡಲಾಗದು"

ಡಾಯಸದ ಮಂಚಣ್ಣ:

"ಅರಿಕೆಯನರಿಯೆಂದು ಕುರುಹು ಕೊಟ್ಟರೆ,
ಕುರುಹು ಮರೆದು ಅರಿದೆನೆಂಬ ಮರುಳರ ನೋಡಾ

ಥಕ್ಕಿಯ ಬೊಮ್ಮಣ್ಣ:

ತಾನುಳ್ಳನಕ್ಕರ ಕಾಲಾಂತಕ ಭೀಮೇಶ್ವರ ಲಿಂಗವ ಪೂಜಿಸಬೇಕು
ಅಂಗದ ಮೇಲೆ!

ಅಮುಗಿ ದೇವಯ್ಯ:

"ಕುರುಡ ಪಥವ ಕಾಣ, ಹೆಳವ ನಡೆಯಲರಿಯ,

ಜ್ಞಾನವಿಲ್ಲದ ಕ್ರಿ ಜಡ! ಕ್ರಿಯಿಲ್ಲದ ಜ್ಞಾನ ಭ್ರಾಂತು

ಶಿವನಾಗಮಯ್ಯ:

"ಲಿಂಗಸಂಬಂಧಿ ಎಂದು ಅಂಗಮುಂತಾಗಿ ಇಪ್ಪವರು
ಲಿಂಗಕ್ಕೆ ದೂರ!"

ತೆಲಗು ಜೊಮ್ಮಣ್ಣ:

ಗುರು ಕಾರುಣ್ಯ ಪಡೆದುದಕ್ಕೆ ಚಿಹ್ನವಾವುದೆಂದರೆ,
ಅಂಗದ ಮೇಲೆ ಲಿಂಗಸ್ವಾಯತವಾಗಿರಬೇಕು."

ಉರಿಲಿಂಗ ಪೆದ್ದಣ್ಣ:

ಸಾಕಾರವ ಹಿಡಿದಲ್ಲದೆ ನಿರಾಕಾರವ ನಂಬಬಾರದು

ಹೀಗೆ ಹಲವಾರು ಪ್ರಮಥರು ನಿರೂಪಿಸುತ್ತಿರುವಾಗ ಪ್ರಭು ದೇವರು ಮಂದ ಹಾಸ ಬೀರುತ್ತ ಕೇಳುತ್ತಿದ್ದರು. ಚೆನ್ನಬಸವಣ್ಣನವರು ಸಂಗ್ರಹಿಸಿ ನುಡಿವರು.

"ಕೇಳಿದಿರಾ ಪ್ರಭು?

ಲಿಂಗವಿಲ್ಲದೆ ನುಡಿವವನ ಲಿಂಗವಿಲ್ಲದೆ ನಡೆವವನ ಅಂಗ ಲೌಕಿಕ! ಅವನ ಶಬ್ದ ಸೂತಕ! ಅವನು ನಡೆನುಡಿಗೊಮ್ಮೆ ವ್ರತಗೇಡಿ! ಕೂಡಲಚೆನ್ನ ಸಂಗಯ್ಯನಾಗಿ ನೀವಿಲ್ಲದ ಅವನ ಮನೆಯ ಪಾಕ ಪ್ರಸಾದವಾಗದು. ಅವನೊ ಡನೆ ಸಹಭೋಜನ ಕೂಡದು. ನೀವೆಂತು ಎಡೆಗೊಂಬುದು ಪ್ರಭುವೇ?"

ಪ್ರಭು ಗಟ್ಟಿಯಾಗಿ ನಕ್ಕರು. "ಚೆನ್ನಬಸವಣ್ಣ ನೀನು ಸೈದ್ಧಾಂತಿಕ ಮಹಾನುಭಾವಿ. ನಿನ್ನ ಮತವನು ಅಲ್ಲೆನ್ನಲುಂಟೇ? ಸಿದ್ಧರಾಮಯ್ಯನೂ ಸಾಮಾನ್ಯನಲ್ಲ. ಸಿದ್ಧಯೋಗಿ. ಪ್ರಾಣವಾಯುವನ್ನು ನಿಗ್ರಹಿಸಿ ಸಮಾಧಿಸುಖ ವನ್ನನುಭವಿಸುವ ಮಹಾಯೋಗಿ......"

ಬಸವರಾಜರು ನಡುವೆ ಬಂದು ನುಡಿದರು: "ಗುರು ತೋರಿದ ಲಿಂಗವು, ಮನಕ್ಕೆ ಸಾಹಿತ್ಯವಾಗಿರುತ್ತಿರಲು ಪವನ ಭೇದದಿಂದ ಅರಿವೆನೆಂಬವರೆ ಅದೇ ದ್ರೋಹ......"

"ನಿಜ ಬಸವೇಶಾ ಓರೆಯಾಮದು ಇಲ್ಲಿಯೇ! ಅವನ್ನೇ ಹೇಳುತ್ತೇನೆ. ಸಿದ್ಧರಾಮಯ್ಯ ಸಾಕಾರನಿಷ್ಠ, ಭೂತದಯೆಯೇ ಮೈವೆತ್ತ ಮೂರ್ತಿ. ಶಿವ ಕರುಣೆಗೆ ಸಂದ ಸದಾನಂದ! ಆದರೆ ಅವನ ಅಖಂಡ ಸಾಧನೆಯು ತನು-ಮನ-ಭಾವಗಳು ಲಿಂಗದಲ್ಲಿ ಲೀಯವಾಗುವದಕ್ಕೆ-ಸಹಜ ಶೂನ್ಯಸ್ಥಲೈಕ್ಯವಾಗು ವದಕ್ಕೆ ಓರೆಯಾಗುತ್ತದೆ."

ಚೆನ್ನಬಸವಣ್ಣನವರಿಗೆ ಮುಖ್ಯ ಮಾತಿನ ತವಕ! "ಹಾಗಾದರೆ ಅಂಗಸ್ಥ ಲಿಂಗಸಂಬಂಧದ ಬಗೆಗೆ ನಿಮ್ಮ ನಿರ್ಣಯವೇನು? ಸ್ಪಷ್ಟವಾಗಲಿ ಪ್ರಭುವೇ"

ಎಂದರು. ಷಟ್‌ಸ್ಥಲಶಾಸ್ತ್ರಕ್ಕೆ ಹೊರತಾದ ವಿಚಾರವನ್ನು ಅವರು ಸಹಿಸುವವು ಶಕ್ಯವಿರಲಿಲ್ಲ.

ಸಿದ್ಧರಾಮ ಶಾಂತವಾಗಿದ್ದನು. 'ಆರೇನೆಂದರೂ ಓರಂತಿಪ್ಪುದೇ ಸಮತೆ' ಎನ್ನುವ ಆಪನ ಮುಖದಲ್ಲಿ ಮನಭಾವಗಳಲ್ಲಿ ಯಾವ ವಿಕಾರವೂ ಇಲ್ಲ. ಅವಿಕೃತಭಾವದಿಂದಲೇ ಆಲಿಸುತ್ತಿದ್ದನು. ಪ್ರಭುದೇವರೆಂದರು:

"ಎಳ್ಳಿಂಗೆ ಪರಿಮಳವ ಕಟ್ಟಿದಲ್ಲದೆ
ಎಣ್ಣೆಗೆ ಪರಿಮಳ ವೇಧಿಸದು.
ದೇಹದಲ್ಲಿ ಇಷ್ಟಲಿಂಗ ಸ್ಥಾಪಿಸಿದಲ್ಲದೆ
ಪ್ರಾಣಲಿಂಗಸಂಬಂಧವಾಗದು ಕಾಣಾ ಸಿದ್ಧರಾಮಯ್ಯಾ"

ಸಿದ್ಧರಾಮಯೋಗಿ ಸಮ್ಮತಿಸಿ ನುಡಿದರು: "ಮನಕ್ಕೆ ಬಂದುದು ಗುರು ದೇವಾ, 'ಇನ್ನು ನಿಮ್ಮ ಶರಣುವೊಕ್ಕೆನಾಗಿ ನಾ ನಿಮ್ಮನೆಂದೂ ಅಗಲದಂತೆ ಮಾಡಯ್ಯಾ, ಶುದ್ಧ-ಸಿದ್ಧ-ಪ್ರಸಿದ್ಧವ ಪ್ರವೇಶಿಸಿ, ಲಿಂಗತ್ರಯದಲ್ಲಿ ಪ್ರಸಾದ ಸಂಪನ್ನರಾಗಿ, ಭಕ್ತಿಜ್ಞಾನ ವೈರಾಗ್ಯಸಂಪನ್ನರಾಗಿ, ಎಂದಿಪ್ಪೆನಯ್ಯಾ ಎಂದು ತವಕ ನನಗೆ! ಕರುಣಿಸು ಪ್ರಭುವೇ" ತಲೆವಾಗಿ ಶರಣಸಂದೋಹಕ್ಕೆ ಕೈಮುಗಿ ದನು. ಶರಣ ಸಂದೋಹ ಜಯಘೋಷಮಾಡಿತು.

ಕಣ್ಣಲ್ಲಿ ಆನಂದ ಜಲಬಿಂದು ಕಾಣಿಸಿಕೊಂಡ ಪ್ರಭುವು:

"ಆದಿಯ ಲಿಂಗವ ಸಾಧ್ಯವ ಮಾಡಿ ತೋರಿದ ಗುಹೇಶ್ವರನ ಶರಣ ಚೆನ್ನಬಸವಣ್ಣಂಗೆ ಶರಣೆಂದು ಬದುಕಿದರೇನು ಕಾಣಾ ಸಂಗನಬಸವಣ್ಣಾ" ಎಂದು ಷಟ್‌ಸ್ಥಲಜ್ಞಾನಿ ಚೆನ್ನಬಸವಣ್ಣಂಗೆ ಎದೆದುಂಬಿ ಕೈಮುಗಿದರು. ವಿನಯದಲ್ಲಿ ಬೆರೆದ ವಿನೋದದಿಂದ ಚೆನ್ನಬಸವಣ್ಣ ಅವರಡಿಗೆ ಬಾಗಿ ನುಡಿ ದರು:

"ನಮೋನಮೋ ಪ್ರಭುದೇವಾ, ಆಡೊಂದು ಐರಾವತಕ್ಕೆ ಸರಿಯಾಗ ಬಹುದೇ?"

"ಯಾಕಾಗಬಾರದು?
ಕಿರಿಯರಾದರೇನು ಹಿರಿಯರಾದರೇನು
ಅರಿವಿಂಗೆ ಹಿರಿಕಿರಿದುಂಟೇ?
ಆದಿಅನಾದಿಯಿಲ್ಲದಂದು, ಅಜಾಂಡ ಬ್ರಹ್ಮಾಂಡಗಳುದಯವಾಗದಂದು
ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೇ ಮಹಾಜ್ಞಾನಿಯೆಂದು
ಕಂಡುಬಂದಿತ್ತು ಕಾಣಾ ಚೆನ್ನಬಸವಣ್ಣಾ!"

ಚೆನ್ನಬಸವಣ್ಣನವರು ಎದ್ದು ಕೈಮುಗಿದೆಂದರು: "ಹೊರಲಾಗದ ಮಾತಿದು ಪ್ರಭುವೆ, ಹಸುಳೆಯನ್ನು ಅಟ್ಟಕ್ಕೇರಿಸಿದರೆ ಅಪಾಯ ಅದಕ್ಕೆ ತಪ್ಪಿದ್ದಲ್ಲ. ನಿಮ್ಮ ಮಹಾಘನದ ಅಳವನಾರು ಬಲ್ಲರು?"

ಪ್ರಭು ಗಳಗಳನೆ ನಕ್ಕರು. "ಇದೀಗ ನಮಗಾದ ಸೋಲಿನಲ್ಲಿ ಗೊತ್ತಾಯಿತಲ್ಲ ನಮ್ಮಳವು."

"ಇದು ನಿಮ್ಮ ಲೀಲೆ, ನೀವು ನಿಮ್ಮನ್ನು ಮರೆಮಾಡುತ್ತೀರಿ.

ತೆರಹಿಲ್ಲದ ಘನವು ಮನದೊಳಗೆ ನಿಂದು ನೆಲೆಗೊಂಡ ಬಳಿಕ,
ಆ ಘನವ ತೆರೆಯ ಮರೆಯಲಡಗಿಸಿಹೆನೆಂದಡೆ ಅಡಗುವದೇ?
ಹೇಮಗಿರಿಯ ಕಸ್ದು ಭೂಮಿಯಲಡಗಿಸಿಹೆನೆಂದಡೆ
ಆ ಕಳವು ಸಿಕ್ಕದ ಮಾಣ್ಬುದೇ?
ಕೂಡಲಚೆನ್ನಸಂಗನ ಶರಣ ಪ್ರಭುವಿನಲ್ಲಿ ಬೆರಸಿದ ಸುಖವ
ಮರೆಸಿಹೆನೆಂದಡೆ ನಿನ್ನಳವೆ ಹೇಳಾ"

'ಮರೆಸಿಹೆನೆಂದಡೆ ನಿನ್ನಳವೆ ಹೇಳಾ' ಎಂದು ಗಟ್ಟಿಯಾಗಿ ನಕ್ಕುನುಡಿದಾಗ ಶರಣರು ಚಪ್ಪಾಳೆಯೊಡನೆ ನಕ್ಕು ನಲಿದರು. ಆ ಗೋಷ್ಠಿ ಪರಮಾನಂದದ ಸಂಪಾದನೆಯಲ್ಲಿ ಸಮಾಪ್ತವಾಯಿತು.

* * * *

ಪ್ರಭುವಿನ ಆದೇಶದಂತೆ ಅತಿಥಿಶಾಲೆಯ ಪೂಜಾಗೃಹದಲ್ಲಿ ಚೆನ್ನಬಸವಣ್ಣನವರು ಸಿದ್ಧರಾಮಯ್ಯನವರಿಗೆ ಸಂಭ್ರಮದಿಂದ ತ್ರಿವಿಧ ದೀಕ್ಷೆಯ ಮಾಡಿ, ಇಷ್ಟಲಿಂಗಧಾರಣ ಮಾಡಿಸಿದರು.

ಸಿದ್ಧರಾಮಯ್ಯ ಕರಸ್ಥಲದ ಪರಬ್ರಹ್ಮವ ಕಂಡು ನುಡಿದರು:

"ಚೆನ್ನಬಸವಣ್ಣ ಗುರುವಾಗಿ
ಎನ್ನ ಜನ್ಮಕರ್ಮವ ನಿವೃತ್ತಿಯ ಮಾಡಿದನಯ್ಯಾ;
ಎನ್ನ ಸುಜ್ಞಾನದ ಮಸ್ತಕದಲ್ಲಿ ಹಸ್ತವನಿರಿಸಿ
ಮನ-ಭಾವ-ಕರಣೇಂದ್ರಿಯಂಗಳ ಸ್ವರೂಪೀಕರಿಸಿ,
ದೃಷ್ಟಿಗೆ ತೋರಿ, ಕೈಯಲ್ಲಿ ಲಿಂಗವ ಕೊಟ್ಟ ಚೆನ್ನಬಸವಣ್ಣ!
ಎನ್ನ ತನ್ನಂತೆ ಮಾಡಿದ ಗುರು ಚೆನ್ನಬಸವಣ್ಣ!
ಆನು ಬಸವಣ್ಣನ ಕರುಣದಿಂದ ಅಭ್ಯಾಸಯೋಗವನತಿಗಳೆದು
ಶಿವಯೋಗದಲ್ಲಿ ನಿತ್ಯನಾಗಿ
ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ
ಷಟ್‌ಸ್ಥಲಕ್ಕೆ ಅಧಿಕಾರಿಯಾದೆ; ನಿನ್ನವರ ಸಲುಗೆಗೆ ಸಂದೆ.
ಚೆನ್ನಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತು ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನ"
"ಭೇದಿಸಬಾರದ ಇದ್ದ ಅಭೇದ್ಯ ಶಿವನೇ
ನಿನ್ನ ಭೇದಿಸಿ ತಂದು ಕೊಟ್ಟನೆನ್ನಯ ಗುರು.
ಇನ್ನು ನಾನಿನ್ನ ಬಿಡುವೆನೇ? ಬಿಡೆ ಬಿಡೆ.
ಮೆಚ್ಚಿದ ಪಾದೋದಕವ, ಮಚ್ಚಿದೆ ಪ್ರಸಾದವ ಗುರುವದ ... ... ಮ.

* * *

ಮುಂದೆ ಮೂರು ದಿವಸಗಳ ವರೆಗೆ ಪ್ರಮಥಗಣದ ಒಲವನ್ನೂ ಭಕ್ತಿಯನ್ನೂ ಅವಲೋಕಿಸಿ ಅನುಲಕ್ಷಿಸಿ, ಅಲ್ಲಮಪ್ರಭುದೇವರು ಬಸವಣ್ಣನವರ ಬಿನ್ನಪವನ್ನು ನಿರಾಕರಿಸಲಾಗದೆ ಅನುಭವ ಮಂಟಪದ ನಿರಂತರದ ಅಧ್ಯಕ್ಷರಾಗಲು ಸಮ್ಮತಿಸಿದರು. ಅದರಿಂದ ಆ ಪರಶಿವನ ಎಡೆಯಲ್ಲಿ ಪ್ರಮಥರು ಮಾಡಿದ ತತ್ತ್ವಾರ್ಥಮಂಥನದ ನವನೀತವು ಸದ್ಭಕ್ತರಿಗೆ ಸುಲಭವಾಗಿ ಸಿಗುವಂತಾಯಿತು. ಬಸವಣ್ಣನವರು ಆ ಮಾರ್ಗದಲ್ಲಿಯ ಅಡ್ಡಿ-ಆತಂಕಗಳನ್ನು, ಸಮಸ್ಯೆಗಳನ್ನು ನಿತ್ಯನಿತ್ಯ ಚರ್ಚೆಗಿಟ್ಟು ಪರಿಹಾರ ಪಡೆದರು. ಆ ಬೆಳಕಿನಲ್ಲಿ ಚೆನ್ನಬಸವಣ್ಣನವರು ತಮ್ಮ ಷಟ್‌ಸ್ಥಲಸಿದ್ಧಾಂತಗಳನ್ನು ಪರಿಪೂರ್ಣಗೊಳಿಸಿಕೊಂಡರು; ಪರಿಶುದ್ಧಗೊಳಿಸಿಕೊಂಡರು.

ಈ ಬಗೆಯ ಅನುಭವಮಂಟಪದ ಕಾರ್ಯ ಪ್ರಭುವಿನ ಹಿರಿತನದಲ್ಲಿ ಎರಡುಮೂರು ವರ್ಷ ನಡೆದಿರಬೇಕು. ಹೊಸ ಮುಮುಕ್ಷುಗಳು, ಜಿಜ್ಞಾಸುಗಳು ತಲೆಯುತ್ತಿದ್ದಾಗ, ನಡೆಯುವ ತಾತ್ವಿಕ ಚರ್ಚೆಗಳಲ್ಲಿ ಮೂಡಿಬರುವ ನಿರ್ಣಯಾತ್ಮಕ ಮಾತುಗಳು ಸಿದ್ಧಾಂತಗಳಾಗಿರುತ್ತಿದ್ದವು. ಇಂತಹ ಸಂದರ್ಭಗಳಲ್ಲಿ, ಜ್ಞಾನ ಗಿರಿಯ ಶಿಖರಕ್ಕೇರಿದ ವೈರಾಗ್ಯನಿಧಿ ಉಡುತಡಿಯ ಮಹಾದೇವಿಯಕ್ಕ ಆಗಮಿಸಿದ ಸನ್ನಿವೇಶ ಶ್ರೇಷ್ಠ ಸಂದರ್ಭವಾಗಿತ್ತು. ಪ್ರಭುವಿನ ತೀಕ್ಷ್ಣಪರೀಕ್ಷೆಗೆ ಪಕ್ಕಾಗಿ ಪಾರಾದಳು ಅಕ್ಕಮಹಾದೇವಿ. ಮನಮೆಚ್ಚಿ ಕೊಂಡಾಡಿದ ಪ್ರಭು, ಅರಿವಿನಲ್ಲಿ ಬೆರೆದ ಆಕೆಯ ನಿಲುವಿಂಗೆ ನಮೋನಮೋ ಎಂದು ವಂದನೆಗೈದರು. ಆಕೆಯ ಅಧ್ಯಾತ್ಮಿಕ ಔನ್ನತ್ಯವನ್ನು ಬಸವರಾಜರಾದಿಯಾಗಿ ಸರ್ವರೂ ಹೊಗಳಿದರು. ಚೆನ್ನಬಸವಣ್ಣನವರು ಉಕ್ಕಿ ಬಂದ ಹರ್ಷದಿಂದ ಹೀಗೆಂದರು:

"ಅಜಕಲ್ಪಕೋಟಿ ವರುಷದವರೆಲ್ಲ ಹಿರಿಯರೇ?
ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಿಯರೇ?
ಅನುವರಿದು ಘನವ ಬೆರಸಿ ಹಿರಿದು ಕಿರಿದೆಂಬ ಭೇದವ ಮರೆದು
ಕೂಡಲಚೆನ್ನಸಂಗಯ್ಯನಲಿ ಬೆರಸಿ ಬೇರಿಲ್ಲದಿಪ್ಪ
ಹಿರಿಯತನ ನಮ್ಮ ಮಹಾದೇವಿ ನಕ್ಕಂಗಾಯಿತ್ತು."

ಮಹಾನುಭಾವೆ ಮಹಾದೇವಿಯಕ್ಕ ಚೆನ್ನಬಸವಣ್ಣನವರ ಘನತೆ ಧ್ಯೇಯ ಸಾಧನೆಗಳನ್ನೊಳಗೊಂಡ ಗೀತವನ್ನು ಸುಂದರವಾಗಿ ಹೀಗೆ ಹಾಡಿ ಶರಣುಗೈದಳು:

"ಮರ್ತ್ಯಲೋಕದ ಭಕ್ತರ ಮನವ ಬೆಳಗಲೆಂದು
ಇಳಿತಂದನಯ್ಯ ಶಿವನು
ಕತ್ತಲೆಯ ಹಾಳುವ ಮನ ಹೊಕ್ಕಂತಾಯಿತ್ತಯ್ಯಾ

ಚಿತ್ತದ ಪ್ರವೃತ್ತಿಯ ಹಿಂಗಿಸಿ, ಮುಕ್ತಿಪಥವ ತೋರಿದನಯ್ಯಾ!
ಅಸಂಖ್ಯಾತ ಗಣಂಗಳಿಗೆ,
ತನುವೆಲ್ಲ ಸ್ವಯಲಿಂಗ ಮನವೆಲ್ಲ ಚರಲಿಂಗ,
ಭಾವವೆಲ್ಲ ಮಹಾಘನದ ಬೆಳಗು.
ಚೆನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣ ಸಮ್ಯಗ್‌ಜ್ಞಾನಿ
ಚೆನ್ನಬಸವಣ್ಣನ ಶ್ರೀ ಪಾದಕ್ಕೆ ಶರಣೆಂದು
ಎನ್ನ ಭವ ನಾಸ್ತಿಯಾಯಿತ್ತಯ್ಯ ಪ್ರಭುವೇ !"

ಪ್ರಮಥರು ಮಂಡಿಸುವ ಸಂದೇಹಗಳಿಗೆ ಸಮಂಜಸ ಉತ್ತರ ನೀಡು[illegible] ಚೆನ್ನಬಸವಣ್ಣನವರ ಜ್ಞಾನಾನುಭವಗಳ ಪ್ರತಿಭೆಯನ್ನು ಪ್ರಭುವು ವಿ[illegible] ಸಂರ್ಭಗಳಲ್ಲಿ ಹಲವು ಬಗೆಯಾಗಿ ಕೊಂಡಾಡಿದ್ದಾರೆ. ಕೆಲವು ಸಲ ಹೀಗಿವೆ:

'ಗುಹೇಶ್ವರ ಲಿಂಗದಲ್ಲಿ ಸರ್ವಸಂದೇಹಗಳ ಕಳೆದಿಪ್ಪ ಚೆನ್ನಬಸವಣ್ಣ[illegible] ನಮೋ ನಮೋ ಎಂಬೆ' ಎಂದು ಸತ್ಕರಿಸಿದ್ದಾರೆ.

ಜ್ಞಾನಕ್ಕಾಶ್ರಯವಾದ ಚೆನ್ನಬಸವಣ್ಣನವರ ಕ್ರಿಯಾಚಾರನಿರ್ಣಯ[illegible] ಮಾರುಹೋಗಿ ಗುಹೇಶ್ವರ ಲಿಂಗದಲ್ಲಿ ನಿನ್ನಆಚಾರಭಿಕ್ಷವನ್ನಿಕ್ಕಾ ಚೆನ್ನಬಸವ[illegible] ಎಂದು ಬೇಡಿದ್ದಾರೆ.

'ಪ್ರಸಾದದ ಹಾದಿಯ ಎಲ್ಲರಿಗೆ ತೋರಿ, ಮಹಾಪ್ರಸಾದದ ಬೆಳವಿಗ[illegible] ಮಾಡಿದ' ಎಂದು ಉದ್ಗರಿಸಿದ್ದಾರೆ.

'---ಲಿಂಗಜಂಗಮ ಪ್ರಸಾದದ ಮಹಾತ್ಮೆಗೆ ಬಸವಣ್ಣನೇ ಆದಿಯ[illegible] ನೆಂಬುದನರಿದ ಸ್ವಯಂಭುಜ್ಞಾನಿ, ಗುಹೇಶ್ವರ ಲಿಂಗದಲ್ಲಿ ಚೆನ್ನಬಸವ[illegible] ನೊಬ್ಬನೇ' ಎಂದು ಸಾರಿದ್ದಾರೆ.

'ನೀನು ಕಾಯವಿಡಿದು ಕಲ್ಪಿತವ ಹೊದ್ದೆ (ಒಳಗಾಗಿಲ್ಲ) ಎಂಬ[illegible] ಕಾಣಬಂದಿತ್ತು, ನೋಡಾ ಚೆನ್ನಬಸವಣ್ಣ' ಎಂದು ಅವರ ತನುವನಪ್ಪಿ ಸ[illegible] ದಿದ್ದಾರೆ.

'ಸರ್ವ ಸಂಸಾರ ವಿರಹಿತ' 'ಅವಿರಳ ಜ್ಞಾನಿ' ಎಂದು ವರ್ಣಿಸಿದ್ದಾ[illegible]

'ಬೆಳಗುವ ಜ್ಯೋತಿಯು ಶಿರುಳಿನಂತೆ-ಹೊಳೆವ ಕಂಗಳ ಕಾಂತಿ, [illegible] ಹೊರಗೆನ್ನದೆ ಅಳವಟ್ಟ ಶಿವಯೋಗಿ ಚೆನ್ನಬಸವಣ್ಣನಲ್ಲಿ, ನಿಜವುಂಡ ನಿ[illegible] ಳದ ಘನವ ಕಂಡು ಬೆರಗಾದೆ' ಎಂದು ಮುಕ್ತಕಂಠದಿಂದ ಹೊಗಳಿದ್ದಾ[illegible]

ಪ್ರಭುದೇವರು ಹೀಗೆ ಹೊಗಳಿದಾಗಳೆಲ್ಲ, ಚೆನ್ನಬಸವಣ್ಣನವರು ತ[illegible] ಅಂತಹ ಹಿರಿಯನ, ಕಿರಿಯನೆಂದೇ ವಿನಯವನ್ನು ಪ್ರಕಟಿಸಿದ್ದಾ[illegible] ಮತ್ತು ಪ್ರಭುವಿನ ಆ ಪರಿಪೂರ್ಣ ಮಹಾಘನದ ನಿಲವನ್ನು ಬಗೆದ[illegible] ತಾವಾಗಿ [illegible] ತೋರಿದ್ದಾರೆ. ಅಂತಹ ಒಂದು ವಚನ ಇಲ್ಲಿದೆ:

"ಅರಿವಿನ ತೃಷೆಗೆ ಅನುಭಾವದಾಶ್ರಯು,
ಲಿಂಗದ ಅನುಭಾವದಿಂದ ನಿಮ್ಮ ಕಂಡೆನು.
ನಿಮ್ಮ ಕಂಡೆನ್ನ ಮರೆದೆ ಕಾಣಾ ಪ್ರಭುವೇ"

ಚೆನ್ನಬಸವಣ್ಣನ ಜಾಣ್ಮೆ ಪಾಂಡಿತ್ಯಗಳನ್ನು ಜ್ಞಾನ ತೇಜಸ್ಸನ್ನು ಕೂಡು ಬಸವಣ್ಣನವರಲ್ಲದೆ ಸರ್ವಶರಣರೂ ಬೆರಗುಗೊಂಡು ಬಗೆದುಂಬಿ ಹೊಗಳಿದ್ದಾರೆ. ಅದನ್ನೆಲ್ಲಾ ಇಲ್ಲಿ ವಿವರಿಸಲು ಅವಕಾಶವಿಲ್ಲ. ಶರಣಸಂತಾನ ಮುಂದೆಯೂ ಅವರನ್ನು ಪರಶಿವನ ಚಿದ್ರೂಪವೆಂದು ವರ್ಣಿಸದೆ ಮುಂದುವರಿದಿಲ್ಲ. ಬಹುಶಃ ಯಾವ ವೀರಶೈವ ಕವಿಗಳೂ ಅವರ ಸ್ತೋತ್ರ ಮಾಡದೆ ಕಾವ್ಯ ರಚಿಸಿಲ್ಲ. 'ಭಕ್ತಿಗೆ ಬಸವಣ್ಣ, ಜ್ಞಾನಕ್ಕೆ ಚೆನ್ನಬಸವಣ್ಣ, ವೈರಾಗ್ಯಕ್ಕೆ ಪ್ರಭುದೇವ' ಎಂಬ ಸೂಕ್ತಿ ನಾಡನುಡಿಯಾಗಿ ಹರಿದು ಬಂದಿದೆ.

ಪ್ರಭುದೇವರು ಕೆಲಕಾಲ ದೇಶಾಂತರ ಹೋದರು. ಶೂನ್ಯಸಿಂಹಾಸನ ಸಿದ್ಧವಾದಾಗ ಅದನ್ನು ಆರೋಹಿಸಲು ಬರುವದಾಗಿ ಶರಣರಿಗೆ ಆಶ್ವಾಸನ ವಿತ್ತಿದ್ದರು. ಬಸವರಾಜರು ಷಟ್‌ಸ್ಥಲತತ್ತ್ವವಿಶಿಷ್ಟವಾದ ಶೂನ್ಯವಿಸ್ತರವನ್ನು ಸಿದ್ಧಗೊಳಿಸಿಕೊಂಡು ಕಾದಿದ್ದಾರೆ. ಚೆನ್ನಬಸವಣ್ಣನವರು ತಮ್ಮ ಆತ್ಮಶಾಸ್ತ್ರ ಸಾಹಿತ್ಯವನ್ನೆಲ್ಲ ಹೊಂದಿಸಿ, ರಚಿಸಿ, ಗ್ರಂಥವಾಗಿಸಿ ಪ್ರಭುವಿಗರ್ಪಿಸಲು ತವಕಗೊಂಡು ಕುಳಿತಿದ್ದಾರೆ. ಪ್ರಭುವಿನ ಸುಳಿವಿಲ್ಲ. ಬರುವವರಿಗಾಗಿ ಕಾಯ್ದವರಿಗೆ ಅದೆಷ್ಟೋ ಕಾಲ ಕಳೆದು ಹೋದಂತೆ ತೋರುವದು. ಚೆನ್ನಬಸವಣ್ಣ ಹೀಗೆ ಚಿಂತಿಸಿದರು,

"ಎನ್ನ ಅನುಭಾವದ ಗಮ್ಯವೇ, ಅರಿವಿನ ವಿಶ್ರಾಮವೇ,
ಭಾವದ ಬಯಕೆಯೇ ನಿಜದ ನಿಲುವೇ',
ಪರಿಣಾಮದ ಮೇರುವೇ, ಮನದ ಮಹಿಮನೇ
ನಿಮ್ಮ ಸುಳುಹೆತ್ತಲಡಗಿತ್ತು ಕೂಡಲಚೆನ್ನ ಸಂಗಯ್ಯನಲ್ಲಿ ಪ್ರಭುವೇ?"

ಪ್ರಭು ಒಮ್ಮೆ ದೇಶಾಂತರದಿಂದ ಕಲ್ಯಾಣದಲ್ಲಿ ಬಂದರು. ಬಸವಣ್ಣನವರು ಅವರನ್ನು ಗುರ್ತಿಸಿ ವಿಜೃಂಭಣೆಯಿಂದ ಮಹಮನೆಗೆ ಬಿಜಯಂಗೈಸಿಕೊಂಡು ಬಂದರು. ಶೂನ್ಯಸಿಂಹಾಸನಾರೋಹಣವಾಯಿತು. ಅದೊಂದು ಶಿವಯೋಗದ ಮಹಾಸಂಕೇತ! ಮಹಮನೆಯ ಶರಣರು ಮನವಾರೆ ಪ್ರಭುವಿನ ಸ್ತೋತ್ರಮಾಡಿ ಹರುಷದ ಕೋಡಿ ಹರಿಸಿದರು. ಚೆನ್ನಬಸವಣ್ಣನವರೂ ಹರುಷ ಪುಳಕಿತರಾಗಿ ಪ್ರಭು ದೇವರ ನಿಜದ ನಿಲುವನ್ನು ಹಾಡಿಹಾಡಿ ಕೊನೆಗೆ ಹಾಡಿದರಿಂತು:

"ರೂಪಿಲ್ಲದ ರೂಪು, ನಿಜವಿಲ್ಲದ ನಿಷ್ಪತ್ತಿ,
ಸೀಮೆಯ ಮೀರಿದ ನಿಸ್ಸೀಮ, ಗಮನವಿಲ್ಲದ ಗಮ್ಯ,
ನಿಜಯೋಗ ನಿಶ್ಶಬ್ದ ಪರವಸ್ತುವಿನ ಪರಿಣಾಮ

ಕೂಡಲಚೆನ್ನಸಂಗನ ಶರಣ ಪ್ರಭುದೇವರಿಗೆ ನಮೋನಮೋ ಎನುತಿರ್ದೆ...

ಅಲ್ಲಮಪ್ರಭುದೇವರ ಪ್ರವಚನಪ್ರಭೆ ಅನುಭವ ಮಂಟಪವನ್ನು ... ರಡು ವರ್ಷ ಬೆಳಗಿತು. ಶಿವಯೋಗ ಸಾಧಕರಿಗೆ ಮಾರ್ಗದರ್ಶನ ಸಾಕಷ್ಟಾ... ಚೆನ್ನಬಸವಣ್ಣನವರ ಷಟ್‌ಸ್ಥಲವಚನಶಾಸ್ತ್ರ ಪೂರ್ಣಗೊಂಡಿತ್ತು. ಪ್ರ... ಕೊನೆಯದಾಗಿ ಕಲ್ಯಾಣದಿಂದ ನಿರ್ಗಮಿಸಿ ಶ್ರೀಶೈಲದ ಕಡೆಗೆ ಹೋ... ದನ್ನು ಒಂದು ಸಂಜೆಯ ಗೋಷ್ಠಿಯಲ್ಲಿ ಪ್ರಕಟಿಸಿದರು. ಆ ವೃದ್ಧ ಮ... ಶಿವಯೋಗಿ, ಸಂಗಡ ಯಾರನ್ನೂ ಒಲ್ಲದೆ ಒಬ್ಬರೇ ಹೊರಡಲನುವಾ... ಸಕಲೇಶ ಮಾದರಸರು ಕೈಮುಗಿದು 'ನೀತಿ ನಿಜ ತತ್ತ್ವಗಳ ಆಧಾರದಿ... ರೂಪಿಸಿದ ಹೊಸ ಧರ್ಮಸಮಾಜಕ್ಕೆ ಬೆಳಕು ನೀಡಿ ನಿರಂತರ ಮಾ... ತೋರಲು ಈ ಶೂನ್ಯ ಪೀಠ ಪರಂಪರೆ ಮುಂದುವರೆಯಬೇಕು ಪ್ರಭು... ಎಂದರು. ತತ್‌ಕ್ಷಣ ಹೌದು ಪ್ರಭುವೇ ಎಂದರು ಶರಣರೆಲ್ಲರು! ಅ... ಪ್ರಭುದೇವರು ನಗುತ್ತ "ಓಹೋ ಅದಕ್ಕೆ ಗುಹೇಶ್ವರನ ನಿಜದ ನಿಲು... ಚೆನ್ನಬಸವಣ್ಣನವರೇ ಅಧಿಕಾರಿ ಎಂಬುದು ಸ್ಪಷ್ಟವಿದೆ" ಎಂದರು. ಕೂಡ... ಶರಣರ ಹರ್ಷದ ಘೋಷಧ್ವನಿ ಗಗನಕ್ಕೇರಿತು. ಚೆನ್ನಬಸವಣ್ಣನವರ ... ನಯ ನಿರಾಕರಣೆ ಫಲಿಸಲಿಲ್ಲ.

ಪ್ರಭುದೇವರು ಚೆನ್ನಬಸವಣ್ಣನವರ ಮಸ್ತಕದಲ್ಲಿ ಹಸ್ತವನಿರಿಸಿ ... ರಂಗದಲ್ಲಿ ಕರುಣಾರಸವನ್ನು ತುಂಬಿ ಪೀಠಾರೋಹಣ ಮಾಡಿಸಿದರು.

ಪ್ರಭುವನ್ನು ಅಗಲುವ ವ್ಯಥೆಯಲ್ಲಿಯೇ ಅವರು ತಮ್ಮ ತಪ ಸ್ಥ... ವನ್ನು ನೀಡಿ ನಿರ್ಗಮಿಸುತ್ತಿರುವದೊಂದು ಬಸವೇಶರಾದಿ ಎಲ್ಲ ಶರಣ... ಒಂದು ಸಮಾಧಾನವಾಯಿತು.

---

## ೬. ಚಿಕ್ಕದಣ್ಣಾಯಕ

ಕಲ್ಯಾಣದಲ್ಲಿಯ ಶರಣರ ಸಾಮಾಜಿಕ ಧಾರ್ಮಿಕ ಕ್ರಾಂತಿ ಕಾರ್ಯ... ಸಫಲತೆಯ ಶಿಖರವನ್ನು ಮುಟ್ಟಿತ್ತು. ಪ್ರಭುದೇವರ ಶೂನ್ಯಸಿಂಹಾಸ... ರೋಹಣ ಸಮಾರಂಭವು ಶರಣರ ಅತ್ಯಧಿಕ ಉತ್ಸಾಹದ ಸ್ಥಿತಿಯಾಗಿತ್ತು... ನಗರದ ಬಹುಪಾಲು ಜೀವನಾಡಿಗಳಿಗೆ ಮಹಮನೆಯೇ ಹೃದಯಕೇಂ... ವಾಗಿತ್ತು. ಅನುಭವ ಮಂಟಪವು ಶ್ವಾಸಕೋಶವಾಗಿತ್ತು. ನಿಜವಾದ ಕಲ್ಯಾಣ...

ಶ್ವರನು ನಾನೋ ಬಸವಣ್ಣನೋಎಂದು ಬಿಜ್ಜಳರಾಜನು ಕೂಡ ಶಂಕಿಸಿ ನುಡಿದಿದ್ದನಂತೆ! ಶರಣರ ಈ ತೀವ್ರಕರವಾದ ಆಂದೋಲನದಿಂದ ಸನಾತನಿಗಳು ಬೆದರಿದ್ದುದರಲ್ಲಿ ಆಶ್ಚರ್ಯವಿಲ್ಲ. ಬಹುಜನ ಸಮಾಜದಲ್ಲಿ ನಡೆಯುತ್ತಿದ್ದ ಹೋಮ ಹವನಾದಿ ಕರ್ಮಗಳು ಕಡೆಗಣಿಸಲ್ಪಟ್ಟವು. ಅವುಗಳ ನೆವದಿಂದ ಆದಾಯ ಹೊಂದಿ ಧನ ಸಂಪನ್ನರಾಗುತ್ತಿದ್ದ ಉಚ್ಚವರ್ಣದವರ ಪರಪುಷ್ಟ ಜೀವನಕ್ಕೆ ಪೆಟ್ಟಾಯಿತು. ಚೆನ್ನಬಸವಣ್ಣನವರ ನೇತೃತ್ವದಲ್ಲಿ ಉತ್ತರಕ್ಕೆ ಪ್ರಯಾಣ ಮಾಡಿದ್ದ ತರುಣ ಶರಣರ ತಂಡವೊಂದು ಇಳಾಪುರಿಯಲ್ಲಿ ನಡೆಯುತ್ತಿದ್ದ ಒಂದು ಯಜ್ಞಮಂಟಪವನ್ನು ಪ್ರವೇಶಿಸಿ ನಿಜತತ್ತ್ವದ ಸ್ಪಷ್ಟೋಕ್ತಿಗಳಿಂದ ಯಜ್ಞವನ್ನು ಖಂಡಿಸಿ, ಬಲಿಗೊಡಲು ತಂದ ಮೇಕೆಯನ್ನು ಬಿಡಿಸಿಕೊಂಡು ಹೊರಬಂದಿದ್ದರು. ಈ ಯಜ್ಞನಿರಸನದ ಸುದ್ದಿ ಸುತ್ತಲೂ ಹರಡಿತ್ತು. ಬ್ರಾಹ್ಮಣನಾದ ಮಧುವರಸುಮಂತ್ರಿಯು ಸರ್ವಸಮತೆಯು, ಶರಣಧರ್ಮ ಸ್ವೀಕರಿಸಿದಾಗ ವೈದಿಕ ಸಂಪ್ರದಾಯದ ಜನರು ಅಸಮಾಧಾನ ಪಟ್ಟರು. ಮಧುವರಸನ ಮಗಳು ಕಲಾವತಿ, ಹರಳಯ್ಯನ ಮಗ ಶೀಲವಂತನಿಗೆ ವಧುವಾಗಿ ಮದುವೆ ನಡೆದಮೇಲಂತೂ ವರ್ಣಾಶ್ರಮ ಧರ್ಮದ ವಿನಾಶವೆಂದು ಆ ಸಂಪ್ರದಾಯಕರು ಹುಯಿಲೆಬ್ಬಿಸಿ ರಾಜನ ಹತ್ತಿರ ಬಂದು ದೂರಿದರು ವರ್ಣಧರ್ಮದ ನಾಶವು ರಾಷ್ಟ್ರಕ್ಕೆ ಆಪತ್ಕಾರಕವೆಂದು, ಅದನ್ನು ರಕ್ಷಿಸುವದು ರಾಜನ ಕರ್ತವ್ಯವೆಂದು ಪ್ರತಿಪಾದಿಸಿ ಬಿಜ್ಜಳನ ತಲೆ ಕೆಡಿಸಿದರು.

ಮಗಳ ಮದುವೆಯ ಮರುದಿನ ಮಧುವರಸನು ತನ್ನ ಮನೆಯಲ್ಲಿ ಒಂದು ಸತ್ಕಾರ ಸಮಾರಂಭವನ್ನು ಏರ್ಪಡಿಸಿದನು. ಪ್ರಮುಖ ಶರಣರು ಉತ್ಸಾಹದಿಂದ ಭಾಗವಹಿಸಿದ್ದರು, ಅರಸನೋಲಗದ ಕೆಲವು ಅಧಿಕಾರಿಗಳೂ ಆಗಮಿಸಿದ್ದರು. ಸೂಕ್ತ ಕಾರ್ಯಕ್ರಮಗಳು ನಡೆದಿದ್ದವು. ಮಧುವರಸನಿಗೆ ಸಾಮಾಜಿಕ ಬಹಿಷ್ಕಾರವನ್ನು ಸಾರಲು ಸನಾತನಿಗಳ ಗುಂಪೊಂದು ಆವಾಗಲೇ ಅಲ್ಲಿಗೆ ಬಂದಿತು. ಅವರ ಮುಂದಾಳು ನಾರಣಕ್ರಮಿತನು. ಆತನು ಬಹಿಷ್ಕಾರವನ್ನು ಘೋಷಿಸಿ ಒಬ್ಬ ಅನಾಮಿಕ ಸ್ತ್ರೀಯಿಂದ ಹೆಬ್ಬಾಗಿಲನ್ನು ಅಶುಚಿಗೊಳಿಸಿ, ಅವಾಚ್ಯಶಬ್ದಗಳನ್ನು ಹಲ್ಗಿರಿಸಿ ಒದರಿಸಿದನು. ಮಧುರಭಾವದಲ್ಲಿ ಮುಳುಗಿದ್ದ ಸಭೆ ಈ ಅನಿರೀಕ್ಷಿತ ಘಟನೆಯಿಂದ ಕಾತರಗೊಂಡಿತು. ಕ್ರೋಧಗೊಂಡ ಮಧುವರಸನು ನಾರಣಕ್ರಮಿತನ ಮೇಲೆ ಎರಗಲು ಧಾವಿಸಿದನು. ಹಿರಿಯ ಶರಣರು ನಿರ್ವಿಕಾರಭಾವದಿಂದ ಕುಳಿತುಕೊಂಡಿದ್ದರು. ಸಹನೆಯ ಮೆಟ್ಟಿಲೇರದ ಕೆಲ ತರುಣ ಶರಣರು ಮಧುವರಸನ ಬೆಂಬಲಕ್ಕೆ ಓಡಿದರು, ಚೆನ್ನಬಸಣ್ಣನವರು ತತ್‌ಕ್ಷಣ ಇವರಲ್ಲಿ ನುಗ್ಗಿ ಮುಂದೆ ಮಧುವರಸನನ್ನು

ಕೈಹಿಡಿದು ತಡೆದರು. 'ನೀವೇಕೆ ಇಷ್ಟು ಸಿಟ್ಟಿಗೆದ್ದೀರಿ? ಇದಕ್ಕಿಂತ ಹೆಚ್ಚಿಗೆ ಇವರೇನೂ ಮಾಡರು. ಇದರಿಂದ ನಮಗೇನಾಗಬೇಕಾಗಿದೆ? ಈ ಹೊಲಸು, ಈ ಹೊಲಸು ಶಬ್ದಗಳು ಇವರ ಭಾವಮನಗಳಲ್ಲಿ ತುಂಬಿ, ಇಷ್ಟು ಹೊರ ಸೂಸಿ ಬಂದಿವೆ. ನಮ್ಮ ಮನಸ್ಸು ಪಾತ್ರಗಳಲ್ಲಿ ಅವನ್ನೇಕೆ ತರುವದ?' ಎಂದನು. ಮಧುವರಸು ಶಾಂತನಾದನು. "ಸರಿ, ಇನ್ನೂ ಏನಾದರೂ ಇದ್ದರ ಮಾಡಿಕೊಳ್ಳಲಿ" ಎಂದನು. ಚೆನ್ನಬಸವಣ್ಣನವರ ಕೈಸನ್ನೆಯಂತೆ ತರುಣರು ಹಿಂದಿರುಗಿ ಜಯಘೋಷ ಮಾಡಿ ಬಂದು ತಮ್ಮ ಸ್ಥಳದಲ್ಲಿ ಕುಳಿತರು. ಬಂದ ಗುಂಪು ಮುಖ ಭಂಗಿತವಾಗಿ ಮೆಲ್ಲನೆ ಸರಿದು ಹೋಯಿತು. ಈ ಘಟನೆ ಯಿಂದ ಇನ್ನೂ ಕೆಲವು ಚಿಕ್ಕ ಪುಟ್ಟ ಘಟನೆಗಳಿಂದ ಶರಣರ ಬಗೆಗಿನ ಸನಾತ ನಿಗಳ ದ್ವೇಷ ಬೆಳೆಯಿತು.

ರಾಜ್ಯದಾಹದಲ್ಲಿ ಬೆಂದಬಳಿಕ ಬಿಜ್ಜಳನ ಗುಣಸ್ವಭಾವಗಳು ತೀವ್ರ ಗತಿಯಿಂದ ಬದಲಾಗಿದ್ದವು. ತೈಲಪರಾಜನ ಮರಣದ ನಂತರ ಅವನ ತಮ್ಮ ನನ್ನು ಸತಿಸುತರನ್ನು ದೂರಮಾಡಿ ಸಾಮ್ರಾಜ್ಯಸಿಂಹಾಸನ ಅಪಹರಿಸಿದುದನ್ನು ಹಿಂದೆ ಹೇಳಿದೆ. ತೈಲಪನ ತಮ್ಮನಾದ ಜಗದೇಕಮಲ್ಲ (ಜಗದೇವ) ನನ್ನು ಕಲ್ಯಾಣದ ರಾಜಗೃಹದಲ್ಲಿ ಬಂಧನದಲ್ಲಿಟ್ಟಿದ್ದನು. ತೈಲಪನ ರಾಣಿಯನ್ನು ಮಗ ಕೀರ್ತಿವರ್ಮನೊಡನೆ ಆಕೆಯ ತವರಿಗೆ ಕರ್ನಾಡಕ್ಕೆ ಅಟ್ಟಿದ್ದನು. ಮನುಷ್ಯನು ಉದಾತ್ತ ವಿಚಾರಗಳಿಂದ ಒಮ್ಮೆ ದೂರವಾದನೆಂದರೆ ಅವನ ಮಾನವತ್ವವು ವಿನಾಶದ ಹಾದಿಯನ್ನು ಹಿಡಿಯುತ್ತದೆ. ಅವನ ಆಶೋತ್ತ ರಗಳು ಹೊಲಸಾಗಿರುತ್ತವೆ. ಆ ದುರಾಶೆಗಳ ಪೂರೈಕೆಗಾಗಿ, ನಿರ್ಲಜ್ಜನಾಗಿ ವರ್ತಿಸುತ್ತಾನೆ. ಹಾಗೆ ಬಿಜ್ಜಳನು ತೈಲಪನ ರಾಣಿಯ ಶೀಲಕ್ಕೆ ಕಲಂಕ ಹಚ್ಚುವ ವಾರ್ತೆಯನ್ನು ಕಲ್ಪಿಸಿ, ಜಗದೇಕಮಲ್ಲನೇ ಹೇಳಿದನೆಂದು ಅಪಪ್ರ ಚಾರ ಮಾಡುವದಕ್ಕೂ ಹೇಸಲಿಲ್ಲ. ಇದರಿಂದ ಕೀರ್ತಿವರ್ಮನ ಸಿಂಹಾಸನದ ಅಧಿಕಾರವನ್ನು ತೊಡೆಯುವದು ಅವನ ಉದ್ದೇಶವಾಗಿತ್ತು. ಆದರೆ ದೈವ ಲೀಲೆ ಬೇರೆಯಾಗಿತ್ತು. ಆ ಚಾಲುಕ್ಯವಂಶೀಯರು ದೂರದೂರದಲ್ಲಿದ್ದರೂ ಗುಪ್ತವಾಗಿ ಸಂಪರ್ಕವಿರಿಸಿಕೊಂಡು ಬಿಜ್ಜಳನನ್ನು ನಿಗ್ರಹಿಸುವ ಸಂಚು ನಡೆ ಯಿಸಿದ್ದರು, ಜಗದೇಕಮಲ್ಲನ ಆಪ್ತಮಿತ್ರನಾದ ನಿಡುಗಲ್ಲಕಪಣದ ಬೊಮ್ಮ ಯ್ಯನು 'ಬ್ರಹ್ಮೇಂದ್ರ ಶಿವಯೋಗಿ' ಎಂಬ ಹೆಸರಿನಿಂದ ತಜ್ಞಜಂಗಮನ ವೇಷದಿಂದ ಮಹಮನೆಯ ಶರಣರಲ್ಲಿ ಸೇರಿದ್ದನು. ಪ್ರವಚನದ ಕತೆಯನ್ನು ಸಾಧಿಸಿದ್ದನು. ಆತನು ಬಂಧನದಲ್ಲಿದ್ದ ಜಗದೇಕಮಲ್ಲನನ್ನು ಕೂಡಿಕೊಳ್ಳುವ ಯತ್ನದಲ್ಲಿದ್ದನು. ಈ ಸಂಚಿನ ಸುಳಿವೇ ಬಿಜ್ಜಳನಿಗೆ ಗೊತ್ತಾಗಿರಲಿಲ್ಲ.

ಹತ್ತುಹನ್ನೆರಡು ವರ್ಷಗಳ ಹಿಂದೆ ವೀರ, ಚತುರ, ಪ್ರಜಾಹಿತದಕ್ಷ, ಧರ್ಮಾಸಕ್ತ, ರಾಜರ್ಷಿಯೆಂತಿದ್ದ ಬಿಜ್ಜಳನು ಈಗ 'ಭುಜಬಲ ಚಕ್ರವರ್ತಿ' ಎಂಬ ಬಿರುದು ಧರಿಸಿ ಮದಾಂಧ ರಾಜನಾಗಿದ್ದಾನೆ. ತನ್ನ ರಾಜ್ಯಾಪಹಾರ ನೀತಿಯನ್ನು ಮನ್ನಿಸದ ಬಸವಣ್ಣನವರ ಪ್ರಭಾವವನ್ನು ಕಡಿಮೆ ಮಾಡುವ ಹವಣಿಕೆ ಅವನದು! ಆದರಿಂದ ಸವರ್ಣೀಯ ಮಂತ್ರಿಗಳ ಸಲಹೆಗಳನ್ನೇ ಒಲಿದು ಅನುಸರಿಸುತ್ತಿದ್ದಾನೆ.

ಹೀಗಿರುವಾಗ ವರ್ಣಸಂಕರದ ದೂರುಕೊಟ್ಟ ತನ್ನ ಅನುಯಾಯಿಗಳ ಆಗ್ರಹವನ್ನು ಮೀರಲಾರದೆ, ವಿಭಿನ್ನ ವರ್ಣಗಳಲ್ಲಿ ಮದುವೆಯ ಸಂಬಂಧ ಮಾಡಿದುದಕ್ಕೆ ಅನುಭವ ಮಂಟಪದ ನೇತಾರ ಬಸವಣ್ಣನವರನ್ನು ಹೊಣೆಗಾರರನ್ನಾಗಿ ಸಾರಿದನು. ಮದುಮಕ್ಕಳ ತಂದೆಗಳಾದ ಹರಳಯ್ಯ, ಮಧುವಯ್ಯಗಳನ್ನು ಮದುಮಗ ಶೀಲವಂತನನ್ನು ಬಂಧಿಸಿ ವಿಚಾರಣೆಗೆ ಗುರಿಪಡಿಸಿದನು. 'ಇದು ವಿಭಿನ್ನವರ್ಣದವರ ನಡುವೆ ಆದ ಮದುವೆಯಲ್ಲ; ವರ್ಣಾತೀತವಾದ ಒಂದೇ ಶರಣಸಂತಾನದಲ್ಲಿ ನಡೆದ ಶರೀರ ಸಂಬಂಧ ಎಂದು ಬಸವಣ್ಣನವರು ಅದನ್ನು ಸಮರ್ಥಿಸಿಕೊಂಡರು. ಆದರೆ ಅದರ ಪ್ರಯೋಜನವಾಗಲಿಲ್ಲ. ಬಿಜ್ಜಳನು ಬಸವಣ್ಣನವರಿಗೆ ಕಲ್ಯಾಣ ತ್ಯಜಿಸುವಂತೆ ರಾಜಾಜ್ಞೆ ಮಾಡಿದನು. ಹೆಚ್ಚಿನ ಘರ್ಷಣೆಯಿಂದ ಶರಣರಿಗೂ ಶರಣ ಧರ್ಮಕ್ಕೂ ಅಹಿತವಾದೀತೆಂದು ಬಸವಣ್ಣನವರು ಸಂಯಮದಿಂದ ಸಂಗಮಕ್ಕೆ ಹೊರಟರು.

ಇದೀಗ ಚೆನ್ನಬಸವಣ್ಣನವರಿಗೂ ತಾಯಿ ನಾಗಲಾಂಬೆಗೂ ಅತಿಕಷ್ಟಕರವಾದ ಸನ್ನಿವೇಶ ಎದುರಾಯಿತು. ಈಗ ಈ ತಾಯಿ ಮಗ ಧೀರೋದಾತ್ತರಾಗಿ ವರ್ತಿಸಿರದಿದ್ದರೆ, ದೇಶದಲ್ಲಿ ಪಸರಿಸಬೇಕಾಗಿದ್ದ ಹೊಸ ಸಮಾಜ ರಚನೆ ಅಲ್ಲಿಯೇ ಕರಗಿ ಹೋಗುತ್ತಿತ್ತು. ಮಾವ, ತಮ್ಮ ಎಂಬ ಬಸವಣ್ಣನವರ ಬಗೆಗಿನ ಮೋಹಕ್ಕಿಂತ, ಬಸವಣ್ಣನವರು ನಡೆದು ನುಡಿದು ರೂಪಿಸಿದ ಧರ್ಮರಕ್ಷಣೆಗೆ, ಅವರು ಆರಂಭಿಸಿದ ಕಾರ್ಯಗಳನ್ನು ಪೂರ್ಣಗೊಳಿಸುವದಕ್ಕೆ ಮಹತ್ವಕೊಟ್ಟು, ಎದೆನೀಡಿ ನಿಂತರು. ಹಿರಿಯ ಶರಣರ ಬೆಂಬಲದಿಂದ ಅನುಭವಮಂಟಪದ ಮೂಲಕ ಶರಣರ ಸಂಘಟನೆಯನ್ನು ಕಾಪಾಡಿಕೊಳ್ಳುವ ನಿರ್ಧಾರ ಮಾಡಿದರು. ನೀಲಾಂಬೆ ಗಂಗಾಂಬೆಯರೂ ಸಾವಧಾನಿಗಳಾಗಿದ್ದರು.

ಅಂದು ರಾತ್ರಿ ಬಸವಣ್ಣನವರಿಗೆ ವಿಶ್ರಾಂತಿಗೊಳ್ಳಲು ತಿಳಿಸಿ, ನಾಗಲಾಂಬೆ ಅವರ ಪ್ರಯಾಣದ ಸಿದ್ಧತೆ ಮಾಡಿದಳು. ರಾತ್ರಿಯ ಮೂರ

ನೆಯು ಜಾವ ಮುಗಿದ ನಂತರ ಬಸವಣ್ಣನವರು ಯೋಗನಿದ್ರೆಯಿಂದ ಬಾಹ್ಯ ಪ್ರಜ್ಞೆಗೆ ಬರುತ್ತಿದ್ದಾಗ ಅವರ ಅಂತರ್ಯದಿಂದ ಅಸ್ಪಷ್ಟವಾಣಿಯೊಂದು ಹೊರಗೆ ಬರುತ್ತಲಿತ್ತು. ಹತ್ತಿರ ಇದ್ದ ಚೆನ್ನಬಸವಣ್ಣ ಕಿವಿಗೊಟ್ಟು ಕೇಳಿ ಬರೆದುಕೊಂಡದ್ದು ಹೀಗೆ:

'ಅರಸು ವಿಚಾರ, ಸಿರಿಯು ಸಿಂಗಾರ ಸ್ಥಿರವಲ್ಲ ಮಾನವಾ,
ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು ನೋಡಾ
ಒಬ್ಬ ಜಂಗಮದಭಿಮಾನದಿಂದ ಚಾಲುಕ್ಯರಾಯನ ಆಳಿಕೆ ತೆಗೆಯಿತ್ತು.
ಸಂದಿತ್ತು ಕೂಡಲ ಸಂಗಮದೇವಾ ನಿಮ್ಮ ಕವಳಿಕೆಗೆ'

ರಾಜ ಒದಗಿಸಿದ್ದ ಸರಂಜಾಮದೊಡನೆ ಬಸವಣ್ಣನವರು ನಸುಕಿನಲ್ಲಿಯೇ ಕಲ್ಯಾಣದಿಂದ ನಿರ್ಗಮಿಸಿದರು. ರಾಜನ ಕಟ್ಟಳೆ ಮೀರಿ ನಾಗರಿಕ ತಂಡಗಳು ನಗರದ ಕಟ್ಟೆಯೊಡೆದು ಬಂದಂತೆ ಹೊರವಲಯಕ್ಕೆ ಬಂದು ಬಸವಣ್ಣವರನ್ನು ಬೀಳ್ಕೊಟ್ಟು, ದುಃಖ ದುಮ್ಮಾನದಿಂದ ಹಿಂದಿರುಗಿದವು. ಆಗ ಮೋಳಿಗೆಯ ಮಾರಯ್ಯನವರು ಶಾಂತಿ ಸುವ್ಯವಸ್ಥೆಗೆ ಪ್ರಯತ್ನಿಸದಿದ್ದರೆ ರಾಜಾಜ್ಞೆಯಿಂದ ರೋಷಗೊಂಡ ಜನಜಂಗುಳಿಯಿಂದ ಪ್ರಮಾದವಾಗುವ ಸಂಭವವೇ ಇತ್ತು.

ಪ್ರಬಲ ಸಮಾಜವಾಗಿದ್ದ ಶರಣರನ್ನು ಎದುರುಹಾಕಿಕೊಳ್ಳುವದೂ ಕಷ್ಟಕರವೆಂಬುವದನ್ನು ಮುತ್ಸದ್ದಿ ಬಿಜ್ಜಳನು ತಿಳಿದಿದ್ದನು. ಚಾಲುಕ್ಯರಾಣಿಗೆ ನಿಂದನೆಯ ಪತ್ರ ಬರೆದು ಅಕೆಯನ್ನು ಬೆದರಿಸುವ ಹಂಚಿಕೆಯಲ್ಲಿದ್ದನು. ಇದೇ ಸಮಯದಲ್ಲಿ ಶರಣರು ಗೊಂದಲವೆಬ್ಬಿಸಬಾರದೆಂದು ಸಂತವಿಡಲು ಬಯಸಿದ್ದನು. ಬಸವೇಶ್ವರರ ನಿರ್ಗಮನದಿಂದ, ಮೂವರು ಶರಣರ ಬಂಧನದಿಂದ, ನೊಂದಿರಬಹುದಾದ ಶರಣರನ್ನು, ಸೋದರಿ ನೀಲಾಂಬೆಯನ್ನು ಸಂತೈಸುವ ಸೋಗು ಹಾಕಿಕೊಂಡು ಮಹಮನೆಗೆ ಬಂದನು. ಜಗದೇಕಮಲ್ಲನು ತನಗೆ ಷಟ್‌ಸ್ಥಲಶಾಸ್ತ್ರ ತಿಳಿಸುವ ಜಂಗಮನೊಬ್ಬನು ಬೇಕೆಂದು ಬಿಜ್ಜಳನಿಗೆ ಬೇಡಿಕೆ ಕಳಿಸಿದ್ದನು. ಸ್ವಾರ್ಥದಸಾಧನೆಯ ಭರದಲ್ಲಿ ವಿವೇಕ ಕಳೆದುಕೊಂಡು ಬಿಜ್ಜಳನು ಅದನ್ನು ನಿಜವೆಂದೇ ನಂಬಿದ್ದನು. ಇದನ್ನೂ ಚೆನ್ನಬಸವಣ್ಣನವರಲ್ಲಿ ಪ್ರಸ್ತಾಪಿಸುವ ಉದ್ದೇಶ ಹೊಂದಿದ್ದನು. ತಾನಾಗಿಯೇ ಮಹಮನೆಗೆ ಹೋದರೂ, ದ್ವೇಷರಹಿತ ಮೃದುಹೃದಯದ ಶರಣರು ತನ್ನನ್ನು ಅಗೌರವಗೊಳಿಸುವದಿಲ್ಲವೆಂಬುವದು ಅವನಿಗೆ ಗೊತ್ತು. ಸಂಗಡ ತನ್ನ ವೃದ್ಧ ಮಂತ್ರಿ ಮಂಚಣ್ಣನನ್ನು ಕರೆದುಕೊಂಡಿದ್ದನು.

ಮಂಚಣ್ಣಮಂತ್ರಿ ಜೀವನದುದ್ದಕ್ಕೂ ಚಾಲುಕ್ಯಸಿಂಹಾಸನದ ಸೇವೆಯಲ್ಲಿ ನಿಂ. ಅವನೇ ಮೊದಲು ಭಾಂಡಾರಿಯಾಗಿದ್ದನು. ಬಸವೇಶ್ವರರು ಬುದ್ಧಿ

ಬಲದಿಂದ ಬಿಜ್ಜಳನ ಒಲುಮೆ ಪಡೆದು ಆ ಸ್ಥಾನ ಹೊಂದಿದ್ದರು. ತನ್ನ ಸ್ಥಾನ ಹೋದದ್ದರಿಂದಲೂ ದಿನದಿನಕ್ಕೆ ಬಸವೇಶ್ವರರು ಉತ್ಕರ್ಷವಾಗುತ್ತಿದ್ದುದರಿಂದಲೂ ಮಂಚಣ್ಣನು ಅವರ ಬಗೆಗೆ ಅಸೂಯೆಪಡುತ್ತಿದ್ದನು. ಬಸವಣ್ಣನವರ ಪ್ರಾಗತಿಕ ವಿಚಾರಗಳನ್ನು ಶರಣರ ಆಂದೋಲನಗಳನ್ನು ವಿಪರೀತಗೊಳಿಸಿ ಬಿಜ್ಜಳನ ಮುಂದೆ ಚಾಡೀ ಹೇಳುತ್ತಿದ್ದನು. ಇಂತಹ ಸಂದರ್ಭಗಳಲ್ಲಿ ಶರಣರ ಒಳ್ಳೆಯ ಗುಣಗಳೇ ಪ್ರಕಾಶಕ್ಕೆ ಬಂದು ಮಂಚಣ್ಣನಿಗೆ ಮುಖಭಂಗವಾಗುತ್ತಿತ್ತು. ಆವರೆ ಬರಬರುತ್ತ ಅರೆದು ಒರೆದು ದೋಷಗಳನ್ನೇ ಹುಡಕುತ್ತ ಹೋದಂತೆ ಮಂಚಣ್ಣನು ಪ್ರಮಥರ ಸತ್ಯಶುದ್ಧ ವರ್ತನೆಗಳನ್ನು ಬಸವಣ್ಣನವರ ಉದಾತ್ತ ವಿಚಾರಗಳನ್ನು ಉಳಿದವರಿಗಿಂತ ಹೆಚ್ಚಾಗಿ ಮನಗಂಡನು. ಅವನ ಬಗೆ ಬದಲಾಯಿತು. ಅನುಭವಮಂಟಪ ಮಹಾಮನೆಗಳ ಸಲುವಾಗಿ ಅವನ ಅಂತರಂಗದಲ್ಲಿ ಭಕ್ತಿಗೌರವಗಳು ಮಮಾಡಿಬಂದವು. ಷಟ್‌ಸ್ಥಲದ ವಚನಗಳನ್ನು ಪರಭಕ್ತಿ ಸಂಪನ್ನನಾಗಿ, ಗುಪ್ತವಾಗಿ ಲಿಂಗಕ್ರಿಯಾಚಾರಗಳನ್ನು ನಡಿಸಹತ್ತಿದ್ದನು. ಆ ಮೇಲೆ ಅವನ ರಾಜಕೀಯ ಅನುಭವಕ್ಕೆ, ಅವನ ಮೃದುಭಾವ-ವಿನಯುಗಳು ಭೂಷಣವಾಗಿ ಬೆಳೆದು ಬಂದಿದ್ದವು. ಎಂದಿನಂತೆ ರಾಜಸೇವೆಯಲ್ಲಿಯೂ ನಿಷ್ಠನಾಗಿಯೇ ಇದ್ದನು. ಈ ಕಾರಣದಿಂದಾಗಿ ಮಂಚಣ್ಣನು ಬಿಜ್ಜಳನಿಗೆ ಸಮೀಪದ ಸಲಹೆಗಾರನಾಗಿದ್ದನು. ಮಹತ್ವದ ಪ್ರಸಂಗಗಳಲ್ಲಿ ಅವನ ಜತೆಗೆ ಹೋಗಬೇಕಾಗುತ್ತಿತ್ತು.

ಮಹಮನೆಯ ಮುಂದೆ ಮಂಚಣ್ಣನೊಡನೆ ರಥದಿಂದಿಳಿದ ಬಿಜ್ಜಳ ರಾಜನನ್ನು ಚೆನ್ನಬಸವೇಶಾದಿ ಶರಣಪ್ರಮುಖರು ಸ್ವಾಗತಿಸಿದರು. ಬಿಜ್ಜಳನು ಅವರ ನಡುವೆ ಹಾಯ್ದು ನೇರವಾಗಿ ಸೋದರಿಯರ ವಾಸಗೃಹಕ್ಕೇ ನಡೆದನು. ಮೊಗಸಾಲೆಯಲ್ಲಿ ತಾನೇ ಆಸನವನ್ನು ಹಿಡಿದು ಕುಳಿತುಕೊಂಡನು. ಒಳಗಿನಿಂದ ನೀಲಾಂಬೆ ಬಂದು ನಮಿಸಿ ಮರೆಯಾಗಿ ಹೋದಳು. ಆಕೆಯ ಕಣ್ಣು ತೇವವಾಗಿದ್ದುದನು ಬಿಜ್ಜಳನು ಕಂಡನು. ಸಪ್ಪಗಾಗಿ ನಿಂತಿದ್ದ ಬಾಲಸಂಗಯ್ಯನನ್ನು ಬಿಜ್ಜಳನು ಕೈಹಿಡಿದೆಳೆದಾಗ ಅವನು ಮುಂದೆ ಬಂದನು. ಸ್ವಲ್ಪ ದೂರದಲ್ಲಿ ನಿಂತಿದ್ದ ನಾಗಮ್ಮ, ರಾಜನ ದೃಷ್ಟಿ ತನ್ನ ಕಡೆಗೆ ಹೊರಳಿದಾಗ ಕೈಮುಗಿದು ಸುಮ್ಮನೆ ನಿಂತಳು; ಮೊಗದಲ್ಲಿ ಯಾವ ವಿಕಾರವೂ ಇರಲಿಲ್ಲ. ಬಿಜ್ಜಳನು ಎದ್ದು ಪ್ರತಿಯಾಗಿ ಕೈಮುಗಿದು ಕುಳಿತನು. ಮುಂದ ಚೆನ್ನಬಸವಣ್ಣ ಶೂನ್ಯವನ್ನು ನೋಡುತ್ತ ನೀರವವಾಗಿ ನಿಂತಿದ್ದರು. ಈ ಎಲ್ಲ ಉದಾಸ ಮೌನದಿಂದ ಬಿಜ್ಜಳನ ಮನ ಹಿಂಡಿದಂತಾಯಿತು. ಆದರೂ ಅವನು ಸಮಯಕ್ಕೆ ತಕ್ಕ ಅನುನಯಕ್ಕಿಳಿಯುವ ಜಾಣ! ಅವನು ಚೆನ್ನಬಸವೇಶ್ವರ

ರಸ್ನು ಅಂಗಳದಲ್ಲಿ ಮಾತನಾಡುತ್ತ ನಿಂತಿದ್ದ ಮಂಚಣ್ಣ ಸಕಲೇಶ ಮಾದ ರಸು ಮಡಿವಳ ಮಾಚಿದೇವ ಇವರನ್ನೂ ಮುಂದಕ್ಕೆ ಕರೆದು ಕೂಡ್ರ ಹೇಳಿ ದನು. ಚೆನ್ನಬಸವಣ್ಣನವರನ್ನು ಮಿದು ನಗೆಯಿಂದ ನೋಡಿ: "ರಾಜಕೀಯವು ಮುಳ್ಳಿನ ಹಾಸಿಗೆ; ಎತ್ತ ಹೊರಳಿದರೂ ಸುಖವಿಲ್ಲ. ಸಕಲೇಶ ಮಾದರಸರಂತ ಎಂದು ಅಲಿಪ್ತನಾದೇನೋ ಎನ್ನಿಸುತ್ತದೆ." ಎಂದನು.

ಚೆನ್ನಬಸವಣ್ಣ ಉತ್ತರಕೊಟ್ಟರು: "ಪ್ರಜಾರಕ್ಷಣೆ ಗುರುತರವಾದ ಹೊಣೆ! ಅದನ್ನು ನಿರ್ವಹಿಸಲು ನೀವಲ್ಲದೆ ಮತ್ತಾರು ಸಮರ್ಥರು? ಸೋವಿ ದೇವರಿಗೆ ಇನ್ನೂ, ಅನುಭವ ಸಾಲದು"

"ನಿಮ್ಮಿಂದ ಅದು ಪೂರೈಸುವದು. ದೇವರೇ ನಿಮ್ಮಿಬ್ಬರಲ್ಲಿ ಸ್ನೇಹದ ಗಂಟು ಹಾಕಿದ್ದಾನೆ. ಅದನ್ನು ನಾನು ರಾಜಕೀಯ ಯೋಜನೆಯಿಂದ ಗಟ್ಟಿ ಗೊಳಿಸಬೇಕೆಂದಿದ್ದೇನೆ. ಈ ಮೊದಲೇ ನಿಮ್ಮನ್ನು 'ಚಿಕ್ಕದಣ್ಣಾಯಕ' ಎಂದು ಕರೆದಿದ್ದೇನೆ."

ಆಗ ಮಹಮನೆಯಲ್ಲಿ ನಾದ ತುಂಬಿದ ಗಾನ ಕೇಳಿಸಿತು:

"ಭಾಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ,
ವಿರಹಿತ ಹೋಗಬಾರದು
ಕಳ್ಳನಾಣ್ಯ ಸಲುಗೆಗೆ ಸಲ್ಲದು, ಕಳ್ಳನಾಣ್ಯ ಸಲ್ಲಲೀಯರಯ್ಯಾ!
ಭಕ್ತಿಯೆಂಬ ಭಾಂಡಕ್ಕೆ ಜಂಗಮವೇ ಸುಂಕಿಗ ಕೂಡಲ ಸಂ. ದೇ."

"ಎಲ್ಲಿಂದ ಬರುತ್ತದೆ ಈ ಗೀತೆ?" ಬಿಜ್ಜಳ ಆಚ್ಚರಿಯಿಂದ ಕೇಳಿದ.

"ಮಹಮನೆಯಲ್ಲಿ ಪೂಜಾರಂಭವಾಗಿದೆ. ಯಾರೋ ಆವೇಶದಿಂದ ಹಾಡುತ್ತಾರೆ" ನಾಗಲಾಂಬೆ ಮೆಲ್ಲನೆ ನುಡಿದಳು.

"ನಿಜ ಅಕ್ಕಾಜಿ, ನಮ್ಮ ಆಗುಹೋಗುಗಳ ಭಾಂಡ ತುಂಬಿದೆ ಸುಂಕ ತೆರುವದೇ ಉಳಿದಿದೆ. ಅವನ್ನೇ ಈಗ ಯೋಚಿಸಬೇಕಾಗಿದೆ. ಚೆನ್ನಬಸವಣ್ಣ ನವರೇ, ನೀವೀಗ ನಮ್ಮ ಹೊಣೆ ಹಗುರಾಗಿಸಲು ನೇರವಾಗಬೇಕು. ಇದನ್ನೇ ಬಿನ್ನವಿಸಿಕೊಳ್ಳಲು ನಾನೀಗ ಬಂದುದು. ಈ ಮಂಚಣ್ಣನವರು ಮುದುಕ ರಾದರು. ಸಾಮಾಜಿಕ ತೊಡಕಿನಿಂದ ಬಸವರಾಜ-ಮಧುವರಸರು ನಮಗೆ ದೂರವಾದರು. ನೀವು ಒಪ್ಪುವದಾದರೆ ಸಚೇತನವಾದ ಹೊಸ ಮಂತ್ರಿ ಮಂಡಲ ರಚಿಸುವ ವಿಚಾರದಲ್ಲಿದ್ದೇನೆ.

"ಲೌಕಿಕದ ಗಂಧವನ್ನರಿಯದ ನನ್ನ ಜೀವನಕ್ಕೆ ಮಂತ್ರಿತನವೆಂಬುದು ಸುಸಂಗತವೇ ಪ್ರಭುಗಳೇ? ಬ್ರಹ್ಮಚರ್ಯದಿಂದ ಧಾರ್ಮಿಕ ಜೀವನಕ್ಕೆ ಮುಡಿಪಾಗಿರುವ ಪ್ರತಿಜ್ಞೆ ಮಾಡಿದ್ದೇನೆ. ಶಾಸ್ತ್ರಾರ್ಥಗಳ ಹೊರತು ನನ ಗೇನೂ ತಿಳಿಯದು.

"ತಪ್ಪೇನಿದೆ? ರಾಜ್ಯಾಡಳಿತಕ್ಕೆ ಧಾರ್ಮಿಕ ಜ್ಞಾನದ ಕೊರತೆಯಾಗಿಯೇ ನಾವೀಗ ಎಡವಿಎಡವಿ ಬೀಳುತ್ತಿದ್ದೇವೆ. ಆ ಭಾಗವನ್ನೇ ನೀವು ನಿರ್ವಹಿಸಿರಿ. ಮಂತ್ರಿಮಂಡಲದ ಸಭೆಗೆ ಮಾತ್ರ ನೀವು ಬಂದು, ಕಾಗದಪತ್ರಗಳನ್ನು ಇಲ್ಲಿಯೇ ನೋಡುತ್ತಿದ್ದರಾಗುವದು. 'ಹೂಂ ಆಗಲಿ' ಎನ್ನಿರಿ ನೀವು"

ಚೆನ್ನಬಸವಣ್ಣನವರು ಅಪ್ರತಿಭರಾದರು. ಉತ್ತರಕ್ಕೆ ಯೋಚಿಸಹತ್ತಿದರು. ಬಿಜ್ಜಳನು ಮಂಚಣ್ಣನ ಕಡೆಗೆ ನೋಡಿ ನುಡಿದನು:

"ನೀವು ಹೇಳಿರಿ ಮಂಚಣ್ಣನವರೇ, ಆಳವಾದ ಆಲೋಚನೆಗೆ ಬಿದ್ದಂತಿದೆ ಚೆನ್ನಬಸವಣ್ಣನವರು!"

ಬಸವಣ್ಣನವರಿಲ್ಲದ ಮಹಮನೆಯು ಕಳೆ ಕುಂದಿದಂತಾದುದಕ್ಕೆ ಮಂಚಣ್ಣ ಮೊದಲೇ ಕಳವಳಪಡಹತ್ತಿದ್ದನು. ಚೆನ್ನಬಸವಣ್ಣನವರು ತಡವರಿಸುತ್ತಿದ್ದುದಕ್ಕೆ ಅನುಕಂಪೆಯೂ ಉಂಟಾಗಿ ಅವರ ನೆರವಿಗೆ ಬಂದು ಬಿಜ್ಜಳರಾಜನನ್ನೇ ಕುರಿತು ಹೇಳಿದನು:

"ಆಕಸ್ಮಾತ್ತಾಗಿ ಬಂದ ಇಂಥ ಗಡುಚಾದ ಹೊಣೆಗಾರಿಕೆಯ ಪ್ರಶ್ನೆಗೆ ಅವರು ಒಮ್ಮೆಲೆ ಹೇಗೆ ಉತ್ತರ ಹೇಳುವರು? ಪ್ರಭುಗಳು ನಾಲ್ಕಾರು ದಿವಸಗಳ ಅವಧಿ ಕೊಡಬೇಕು. ಜತೆಯ ಅನುಭವಿಗಳನ್ನು ವಿಚಾರಿಸಿ, ಬಸವಣ್ಣನವರಿಗೆ ತಿಳಿಸಿ ಅನುಮೋದನೆ ಪಡೆದು ಉತ್ತರ ಕೊಡಲಿ"

"ಹಾಗೆ ಮಾಡಿರಿ. ಸೋವಿದೇವನ ಪಟ್ಟಾಭಿಷೇಕದ ಸಲುವಾಗಿ ಮಂಗಳವೇಡೆಗೆ ಹೋಗುವ ಮೊದಲು ಹೊಸವ್ಯವಸ್ಥೆ ಮಾಡಿ ಬಿಡಬೇಕಾಗಿದೆ. ಒಂದು ವಾರದಲ್ಲಿ ತಿಳಿಸಿರಿ. ನಾವು ಮಾತ್ರ ನಿಮ್ಮ ಹೆಸರನ್ನು ನಮ್ಮ ಹೊಸ ವ್ಯವಸ್ಥೆಯಲ್ಲಿ ಇರಿಸಿಕೊಂಡೇ ಮುಂದೆ ಸಾಗುತ್ತೇವೆ."

ಮಂಚಣ್ಣನ ನೆರವಿನಿಂದ ಸಮಾಧಾನಗೊಂಡ ಚನ್ನಬಸವೇಶ ಕೈಮುಗಿದು"ನಾನು ನಿರಾಕರಣೆಯ ಉತ್ತರ ಕೊಟ್ಟರೆ ಪ್ರಭುಗಳು ಕ್ಷಮಿಸಬೇಕು."

"ನೀವು ಸ್ವತಂತ್ರರೇ ಇದ್ದೀರಿ. ಆದರೆ ನಿರಾಕರಿಸಬೇಡಿರೆಂದು ನನ್ನ ವಿನಂತಿ! ರಾಜಕೀಯದಲ್ಲಿಯೂ ನಿಮಗೆ ಅನುಭವವಾದರೆ ಸೋವಿದೇವನ ಹಿರಿಯ ಮಂತ್ರಿಯಾಗುವಿರಿ."

ನಗುತ್ತ ಬಿಜ್ಜಳ ಎದ್ದನು, ಕೋಣೆಯಿಂದ ಕಂಬನಿದುಂಬಿದ ನೀಲಲೋಚನೆ ಹೊರಗೆ ಬಂದಳು. ಆ ಭಾವ ತಿಳಿಯಿತು ಬಿಜ್ಜಳನಿಗೆ "ನಿನ್ನ ಮನೋವ್ಯಥೆ ತಿಳಿದಿದೆ ನೀಲಾ. ನಿನ್ನ ದಾಂಪತ್ಯಜೀವನಕ್ಕೆ ಚ್ಯುತಿಬಾರದಂತೆ ನೋಡಿಕೊಳ್ಳುವೆ"

"ನನ್ನ ಪತಿಯ ಪ್ರಾಣವು ತನುವಿನ ಮಟ್ಟಿಗೆ ಇಲ್ಲ ಅಣ್ಣಾ,"

"ಈ ಮಹಾ ವಿಚಾರಕ್ಕೆ ಅವರು ಸಮರ್ಥರೇ ಇದ್ದಾರೆ. ಉಳಿದು ದೆಲ್ಲ ನನ್ನೊಬ್ಬನ ಕೈಯೊಳಗಿಲ್ಲ ತಾಯೀ"

"ಪ್ರಭುಗಳು ಯಥಾರ್ಥವನ್ನೇ ಹೇಳುತ್ತಾರೆ" ಎಂದು ಅಕ್ಕನಾಗಮ್ಮನು ಮಾತು ಪ್ರತಿಮಾತುಗಳನ್ನು ಮುಕ್ತಾಯಗೊಳಿಸಿದಳು. ಆ ಸನ್ನಿವಾರಣೆಗೆ ಪ್ರ ನನ್ನಲ್ಲದೆ ನರರನ್ನೇಕೆ ಕೇಳಬೇಕೆಂಬುದು ಅಕ್ಕನ ಅಭಿಪ್ರಾಯ!

ಅಂಗಳದಲ್ಲಿ ನಾಲ್ಕು ಹೆಜ್ಜೆ ಹೋದ ಬಿಜ್ಜಳರಾಜ ಮರಳಿ "ಚೆನ್ನಬಸ ವೇಶಾ, ನಾವು ಬಂದ ಇನ್ನೊಂದು ಉದ್ದೇಶವನ್ನೇ ಮರತಿದ್ದೇವೆ. ಜಗನ್ನ ಕಮಲ್ಲರಿಗೆ ತತ್ತ್ವೋಪದೇಶ ಮಾಡಲು ಪಂಡಿತ ಜಂಗಮರೊಬ್ಬರು ಬೇಕಾತ್ತೆ. ಅಂತಹ ಒಬ್ಬರನ್ನು ನೀವು ನಮಗೆ ಕೊಡಬೇಕು. ಚಕ್ರವರ್ತಿಗಳು ಅಪೇಕ್ಷಿಸಿ ವವರೆಗೆ ಅವರು ರಾಜಗ್ರುಹದಲ್ಲಿಯೇ ಇರಬೇಕಾಗುವದು."

ತತ್‌ಕ್ಷಣ ಮಡಿವಾಳಮಾಚಯ್ಯ: 'ಅಂತಹ ಪಂಡಿತರೊಬ್ಬರು ಇದ್ದಾರೆ ಪ್ರಭುಗಳೇ, ಅವರನ್ನು ಕಳಿಸುತ್ತೇವೆ" ಎಂದು ಚೆನ್ನಬಸವಣ್ಣನತ್ತ ತಿರುಗಿ, "ಬ್ರಹ್ಮೇಂದ್ರ ಶಿವಯೋಗಿ ಹೋಗಿರಿ, ಅವರು ತಿಳಿಸಿ ಹೇಳುವಲ್ಲಿ ಜಾಣರು" ಎಂದನು.

"ಆಗಬಹುದು" ಎಂದು ಸಹಜವಾಗಿ ಹೇಳಿ, ಚೆನ್ನಬಸವಣ್ಣ ಬಿಜ್ಜಳ ರಾಜನನ್ನು ಬೀಳ್ಕೊಟ್ಟರು. "ಸರಿ, ರಾಜಗೃಹಕ್ಕೆ ತಿಳಿಸುತ್ತೇನೆ" ಎನ್ನುತ್ತ ಬಿಜ್ಜಳ ನಡೆದನು. ಸಕಲೇಶ ಮಾದರಸರೊಡನೆ ಮೆಲ್ಲಗೆ ಮಾತಾಡುತ್ತಿದ್ದ ಮಂಚಣ್ಣನು ಬೇಗ ಹೋಗಿ ರಾಜನನ್ನು ಕೂಡಿಕೊಂಡನು.

ಮುಚ್ಚಂಜೆಯು ಮಬ್ಬುಕವಿದಿರುವಾಗ ಕರೆಯಬಂದ ಸೇವಕನೊಡನೆ ಸಕಲೇಶಮಾದರಸರು ಮಂಚಣ್ಣ ಮಂತ್ರಿಯ ಮನೆಗೆ ಹೋದರು. ಒಳಅಂಗ ಳದಲ್ಲಿ ಮಂಚಣ್ಣನು 'ಶರಣು ಬರಬೇಕು' ಎಂದು ಸ್ವಾಗತಿಸಿ ಸ್ವತಃ ಕಾಲಿಗೆ ನೀರು ಕೊಟ್ಟು ಒಳಗೆ ಕರೆದೊಯ್ದನು. ಧೂಪದ ಸುವಾಸನೆ, ಕರ್ಪೂರದ ಸರುಗಂಪು ಮನೆಯಲ್ಲೆಲ್ಲ ಇಡುಗಿದೆ. ಭಸ್ಮಭೂಷಿತನಾದ, ರುದ್ರಾಕ್ಷಿಮಾಲಾ ಧಾರಿಯಾದ, ಮಡಿಯ ಮೇಲುದ ಹೊದ್ದ, ಅದೇ ಪೂಜೆ ನೆರವೇರಿಸಿ ಬಂದ ಶಾಂತಭಾವದ ಮಂಚಣ್ಣನನ್ನು, ಹಾಗೆಯೇ ಮನೆಯ ಮಂದಿಯನ್ನು ನೋಡಿದ ಮಾದರಸರಿಗೆ ಅತ್ಯಾಶ್ಚರ್ಯ!

'ನಾನು ಯಾರ ಮನೆಗೆ ಬಂದಿದ್ದೇನೆ? ಈ ಶರಣಶಿರೋಮಣಿ ಮಂಚಣ್ಣ ಮಂತ್ರಿಯೇ?" ಎಂದು ಕಕ್ಕಾವಿಕ್ಕಿಯಾಗಿ ದಿಟ್ಟಿಸಿ ನೋಡುತ್ತಿ ದ್ದರು. ಕಂಬನಿ ಮೂಡಿದ್ದವು.

"ಏನು ಸಂಕೋಚವೇ?" ಮಂಚಣ್ಣ ಕೇಳಿದನು.

"ಸಂಕೋಚವೇಕೆ ಇಲ್ಲಿಯದು? ನಾವೆಷ್ಟು ತಪ್ಪು ತಿಳಿದಿದ್ದೆವಲ್ಲಾ. ಎನಿಸಿತು" ಮಾದರಸರ ಕಂಠ ಬಿಗಿದಿತ್ತು.

"ಯಾರದು ತಪ್ಪು ಯಾರದು ಒಪ್ಪು? ಹಿಂದಿನಿಂದ ನೋಡೋಣ, ಈ ಮನೆ ನಿಮ್ಮದು! ಈಗ ಪೂಜಾಪ್ರಸಾದ ಸಮಯ. ಸ್ನಾನವಾಗಲಿ"

ಮಂತ್ರಿಯು ಮಾದರಸರ ಎದೆಯ ಮೇಲಿನ ಅಂಗಿಯ ಕಸಿಗಳನ್ನು ತಾನೇ ಬಿಚ್ಚಹತ್ತಿದನು. ಪರಮಾನುಭಾವಿ ಮಾದರಸರು ಮಂಚಣ್ಣನ ಪರಿಶುದ್ಧಭಾವದಲ್ಲಿ ತೇಲಿ ಹಸುಗೂಸಿನಂತೆ ಅವನನ್ನು ಹಿಂಬಾಲಿಸಿದರು. ಸ್ನಾನ ಮಾಡಿ ಅವರ ಪೂಜಾಗೃಹದಲ್ಲಿ ಆನಂದದಿಂದ ಅರ್ಚನೆಗೈದರು. ಅನುಭಾವದ ಮಾತನಾಡುತ್ತ ಇಬ್ಬರೂ ಪ್ರಸಾದ ಸೇವಿಸಿದರು. ಬಳಿಕ ಮಂತ್ರಾಗಾರದ ಕೋಣೆಯಲ್ಲಿ ಬಂದರು.

ಮಂಚಣ್ಣನು ನಡೆದು ಬಂದ ತನ್ನ ಜೀವನದ ದಾರಿಯನ್ನು ಸ್ವಲ್ಪದರಲ್ಲಿ ವಿವರಿಸಿ ಪಶ್ಚಾತ್ತಾಪದ ದನಿಯಲ್ಲಿ ನುಡಿದನು.

"ಬಸವಣ್ಣನವರ ಉತ್ಕರ್ಷದ ಬಗೆಗೆ ಮತ್ಸರ ಮಾಡಿದೆ. ಅನುಭವ ಮಂಟಪದ ಕಾರ್ಯಕಲಾಪಗಳನ್ನು ಟೀಕಿಸಿ ಕೀಟಲೆಗೊಳಿಸಿದೆ......"

ಒಡನೆ ತಡೆದು ನುಡಿದರು ಮಾದರಸರು!

"ಅದು ಶಿವಲೀಲೆ. ಅದರಿಂದ ಯಾರಿಗೂ ಅಪಕಾರವಾಗಿಲ್ಲ; ಉಪಕಾರವೇ ಆಗಿದೆ. ಅರೆದು ಒರೆದಾಗಲೇ ಹೊನ್ನು ಹೊನ್ನಾಗುವದು"

"ಅದು ಮಾತ್ರ ನಿಜ! ಅದರಿಂದಲೇ ಹೊನ್ನು ಹೊನ್ನೆಂದು ತಿಳಿದೆ. ಬಹುಕಾಲದ ಕೆವರುನುಡಿಗಳಿಂದಲೇ ತೆರೆಹರಿದು ನಿಜದ ಅರಿವು ತೋರಿತು, ಬಸವಣ್ಣನವರ ತಾತ್ವಿಕ ವಿಚಾರಗಳಿಗೆ, ಸಕಲರ ಕಲ್ಯಾಣಮಾಡುವ ಅವರ ನಡತೆಗೆ ನನ್ನಮನ ಮಾರುಹೋಯಿತು. ಅನುಭವಮಂಟಪದ ಕಾರ್ಯಕಲಾಪಗಳ ವಾರ್ತೆಗಳನ್ನು ಕಿವಿದೆರೆದು ಕೇಳಹತ್ತಿದೆನು, ಆಗ ನನ್ನ ಅಂತರಂಗ ಅರಳಿತು. ಇಲ್ಲಿ ನೋಡಿರಿ ವಚನಗಳ ಕಟ್ಟುಗಳು! ಇವುಗಳನ್ನು ಓದುತ್ತಿರುವಾಗ ಮನಸ್ಸು ಶಾಂತವಾಗುತ್ತದೆ; ಹೃದಯದಲ್ಲಿ ಬೆಳಕು ಬಿದ್ದಂತಾಗುತ್ತದೆ. ನನ್ನ ಭಾವದಲ್ಲಿ ಬಸವಣ್ಣನವರೇ ನನ್ನ ಗುರು! ನೀವೆಲ್ಲ ನನ್ನ ಗುರುಗಳು-ನಿಮ್ಮೆಲ್ಲರ ಈ ನುಡಿಗಳೇ ನನ್ನ ಅಂತರಂಗದಲ್ಲಿ ಜ್ಯೋತಿಯನ್ನು ಜೊತ್ತಿಸಿವೆ. ಬೆಳಕ ನೀಡಿವೆ. ಆಜನ್ಮ ಅನ್ನವಿತ್ತ ರಾಜಸೇವೆಯನ್ನೂ ನಾನು ಅಲಕ್ಷಿಸಲಾರೆ. ರಾಜಕೀಯ ವಾತಾವರಣ ವಿಷಮಯವಾಗಿರುವದರಿಂದ ಯಾರಿಗೂ ತಿಳಿಯದಂತೆ ನನ್ನಷ್ಟಕ್ಕೆ ನಾನು ಈ ಲಿಂಗಕ್ರಿಯಾಚಾರಗಳನ್ನು ಕೈಕೊಂಡಿರುವೆ."

ಆನಂದಾಂಬು ತುಂಬಿದ ಕಣ್ಣುಗಳಿಂದ ಮಾವರಸರು: 'ಧನ್ಯರು ನೀವು ಮಂಚಣ್ಣನವರೇ' ಎಂದು ಕೈಮುಗಿದರು.

"ಜಗದ ಜಂಜಡವ ಹಂಗು ಹರಿದು ಅಖಂಡಾನಂದದಲ್ಲಿ ಇರುವ ನೀವು ಧನ್ಯರು ಶಿವಯೋಗಿಗಳೇ" ಎನ್ನುತ್ತ ಮುಂದಕ್ಕೆ ಬಾಗಿ ವಂದಿಸಿದನು ಮಂಚಣ್ಣ.

ಸದ್ಭಾವದಲ್ಲಿ ಬೆರೆದು ಇಬ್ಬರೂ ಕ್ಷಣಹೊತ್ತು ಮೌನವಾಗಿದ್ದರು. ಬಳಿಕ ಮಂಚಣ್ಣನೇ ಪ್ರಸ್ತುತ ಪ್ರಸಂಗದ ಮಾತಿನಲ್ಲಿ ಮುಂದುವರಿದನು.

"ಲೋಕಕಲ್ಯಾಣಕ್ಕಾಗಿ ಶರಣರ ಸಂಘಟನೆ ಉಳಿದು ಬೆಳೆಯಬೇಕೆಂದು ನನ್ನಾಸೆ! ಆದರೆ ಅವರ ವಿರೋಧಿಗಳು ಪ್ರಬಲರಾಗಿದ್ದಾರೆ. ತನ್ನ ಸ್ವಾರ್ಥ ಸಾಧನೆಗೆ ಆ ವಿರೋಧಿಗಳು ಅನುಕೂಲರಾಗಿದ್ದಾರೆಂದು ಅರಸನೂ ಅವರತ್ತ ಒಲಿಯುತ್ತಿದ್ದಾನೆ. ತೈಲಪ ಚಕ್ರವರ್ತಿಗಳ ದೌರ್ಬಲ್ಯದಿಂದ ಒಡೆದು ಹೋಗಬಹುದಾದ ಸಾಮ್ರಾಜ್ಯವನ್ನು ಉಳಿಸಿದವರೆಂದು ನಾನು ಬಿಜ್ಜಳ ರಾಜನನ್ನು ಓಲೈಸುತ್ತಿದ್ದೇನೆ. ಸಾಮ್ರಾಜ್ಯಸೇವೆ ನನ್ನ ಕರ್ತವ್ಯ! ಆ ಮಾತು ಇರಲಿ. ಶರಣರು ಈಗ ಜಾಗ್ರತರಾಗಿರಬೇಕೆಂದು ನಾನು ತಿಳಿಸಬೇಕಾಗಿತ್ತು. ತಮಗೆ ಶ್ರಮಕೊಡಬೇಕಾಯಿತು."

"ಶ್ರಮವೇನಿಲ್ಲ ಮಂತ್ರಿಗಳೇ! ಪರಿಸ್ಥಿತಿಯೇನು? ನಿಮ್ಮ ಸಲಹೆಯೇನು? ಶರಣರು ಯಾವಾಗಲೂ ಅವಾಸ್ತವಕ್ಕಿಳಿಯುವದಿಲ್ಲ."

"ಅದು ನನಗೆ ಗೊತ್ತು. ಈಗ ಮಧುವರಸು-ಹರಳಯ್ಯನವರಗಳನ್ನು ಉಗ್ರವಾಗಿ ದಂಡಿಸುವ ಸಂಭವವೇ ಹೆಚ್ಚಿದೆ. ಸಾಧ್ಯವಾದಷ್ಟು ಅದನ್ನು ತಪ್ಪಿಸಲು ನಾನು ಪ್ರಯತ್ನಿಸುವೆ. ಮಂತ್ರಿಮಂಡಲದಲ್ಲಿ ನನಗೆ ಬೆಂಬಲವಿಲ್ಲ. ರಾಜನದು ನಿಜವಿರಲಿ, ನಾಟಕವಿರಲಿ, ಅವನ ಕೋರಿಕೆಗೆ ಮನ್ನಣೆಯಿತ್ತು ಮಂತ್ರಿಯಾಗಲು ಚೆನ್ನಬಸವಣ್ಣನವರನ್ನು ಒಪ್ಪಿಸಿರಿ. ಅವರಿಗೆ ಆಡಳಿತದಲ್ಲಿ ಅನುಭವವಿಲ್ಲದಿದ್ದರೂ ಅವರು ನಿಷ್ಠ ಸತ್ವಶಾಲಿಗಳಾಗಿದ್ದಾರೆ. ನೀತಿ-ಧರ್ಮಗಳ ದೃಷ್ಟಿಯಿಂದ ಸಮಸ್ಯೆಗಳನ್ನು ಕಾಣಬಲ್ಲರು. ಬಾಲಕನಾಗಿರುವಾಗಲೇ ಬಿಜ್ಜಳ ರಾಜನ ಪ್ರೀತಿಗೆ ಪಾತ್ರರಾಗಿದ್ದಾರೆ. ಚಿಕ್ಕವರಾದರೂ ನನಗೆ ಜತೆಯಾಗುವರು. ಶರಣರ ಮೇಲಿನ ವಿರೋಧವನ್ನು ಸೌಮ್ಯಗೊಳಿಸಲು ಸಾಧ್ಯವಾಗಬಹುದು. ಆತ್ಮಬಲದಿಂದ ವೈಯಕ್ತಿಕವಾಗಿ ಶರಣರು ನಿರ್ಭೀತರು. ಆದರೆ ಬಸವೇಶ್ವರರು ರೂಪಿಸಿದ ಧಾರ್ಮಿಕ ಸಂಘಟನೆ, ವಚನಗಳಂತಹ ತತ್ತ್ವಸಾಹಿತ್ಯ ಸಂಗ್ರಹ, ಮುಂದಿನ ಯೋಜನೆ ಇವುಗಳಿಗೆ ಅಪಾಯದ ಭಯ ಇಲ್ಲದಿಲ್ಲ! ನನಗೆ ಕಳವಳವಾಗುತ್ತದೆ. ಇವುಗಳ ರಕ್ಷಣೆ ಅತ್ಯಗತ್ಯವೆಂದು ನನ್ನ ಮತ.

ಶರಣರು ತತ್ತ್ವಾರ್ಥ ಚಿಂತನೆಯೊಂದನ್ನೇ ಮಾಡಿದರಾಗದು. ಅನುಭವ ಮಂಟಪದ ಕ್ರಿಯಾ ಸಮಿತಿಯು ರಕ್ಷಣೆಗಾಗಿ ಉಪಾಯಗಳನ್ನು ಯೋಜಿಸಬೇಕು. ವ್ಯಾವಹಾರಿಕ ಪ್ರಜ್ಞೆಯಿಂದ ಈಗಿನ ಪರಿಸ್ಥಿತಿಯನ್ನು ಕಾಣಬೇಕು. ಅಸಂಖ್ಯಾತ ಅನುಯಾಯಿಗಳಿದ್ದಾರೆ. ಅವರಿಗೆ ಮಾರ್ಗದರ್ಶನ ಮಾಡಬೇಕು ಇದಿಷ್ಟು ನನ್ನ ಸಲಹೆ. ಸರಿಯೆನಿಸಿದರೆ ಸ್ವೀಕರಿಸಿರಿ.

"ಅನುಸರಿಸಲೇ ಬೇಕು. ಮಂತ್ರಿವರರೇ! ತುಂಬ ಎಚ್ಚರಿಕೆಯ ಮಾತಿದು ಅನುಭವಮಂಟಪ ಪ್ರತಿಷ್ಠಾನವು ತಮಗೆ ಕೃತಜ್ಞವಾಗಿರುವದು."

"ಮಹಾನುಭಾವರು ತಾವು ನನ್ನ ಕುಟೀರಕ್ಕೆ ಬಂದು ಪಾವನಗೊಳಿಸಿದಿರಿ. ನಾನು ಧನ್ಯನು,"

ಮಂತ್ರಿಯು ಮಾದರಸರ ಅಡಿಗೆ ಮುಡಿಯಿಟ್ಟನು. ಮಾದರಸರು ಪ್ರತಿಯಾಗಿ ವಂದಿಸಿದರು.

ಅಷ್ಟರಲ್ಲಿ ರಾತ್ರಿ ೧೧ ಗಳಿಗೆಯಾಯಿತು. ಮಂಚಣ್ಣನು ಮಾದರಸರನ್ನು ಯೋಗ್ಯ ಜತೆಗಾರರೊಡನೆ ಗಾಡಿಯಲ್ಲಿ ಕುಳ್ಳಿರಿಸಿ ಮಹಮನೆಗೆ ಬೀಳ್ಕೊಟ್ಟನು.

ಮರುದಿನ ಪ್ರಾರ್ಥನಾ ಯೋಗದ ನಂತರ ಕೂಡಿದ ವಿಚಾರ ಸಮಿತಿಯಲ್ಲಿ ಸಕಲೇಶ ಮಾದರಸರು, ಮಂಚಣ್ಣನ ಮನೆಯಲ್ಲಿ ತಾವು ಕಂಡುದನ್ನು, ಬದಲಾದ ಅವನ ಭಾವನೆಯನ್ನು. ಅವನ ಹಿತವಚನಗಳನ್ನು ಹೃದಯಂಗಮವಾಗಿ ವಿಶದವಾಗಿ ವಿವರಿಸಿದರು. ಮಡಿವಳಮಾಚಯ್ಯ ಹೆಮ್ಮೆಯಿಂದ ಹೇಳಿದ: "ಬಸವಣ್ಣನವರ ಬೋಧೆ ಮಾಡಿದ ಅದ್ಭುತ ಕ್ರಾಂತಿಗೆ ಇದು ನಿದರ್ಶನ" ಎಂದು. ಮಂಚಣ್ಣನ ನಿಲುವನ್ನು ಶ್ಲಾಘಿಸಿದ ನಾಗಲಾಂಬೆ 'ಇದೇ ಶರಣ ಧರ್ಮದ ಹಿರಿಮೆ!' ಎಂದಳು. ಮಂಚಣ್ಣನ ಸೂಚನೆಯನ್ನು ಹಿನ್ನೆಲೆಯಾಗಿರಿಸಿಕೊಂಡು ವಿಚಾರಸಮಿತಿಯು ಶರಣರ, ಶರಣಧರ್ಮದ ರಕ್ಷಣೆಗಾಗಿ ಮುಂದಿನ ಕ್ರಮಗಳನ್ನು ಯೋಚಿಸಿತು. ರಾಜಾಧಿಕರಣದಲ್ಲಿ ತಮಗೊಂದು ಸ್ಥಾನವಿರುವದು, ಆಗು ಹೋಗುಗಳನ್ನು ಅರಿಯುವದಕ್ಕೆ ಅನುಕೂಲವೆಂಬ ಮಡಿವಾಳ ಮಾಚಯ್ಯನ ನಿಶ್ಚಿತ ಅಭಿಪ್ರಾಯವನ್ನು ಎಲ್ಲರೂ ಒಪ್ಪಿದರು. ಹಿರಿಯರೆಲ್ಲರ ಒಟ್ಟಾಭಿಪ್ರಾಯದಂತೆ ಚೆನ್ನಬಸವಣ್ಣನವರು ಸಚಿವಪದ ಸ್ವೀಕರಿಸಲು ಒಪ್ಪಬೇಕಾಯಿತು. ಸಂಗಮಕ್ಕೆ ಕಳಿಸಲ್ಪಟ್ಟ ತರುಣ ಶರಣನೊಬ್ಬನು ಆರುದಿನಗಳಲ್ಲಿ ಬಸವೇಶ್ವರರ ಅನುಮೋದನೆಯನ್ನು ತಂದೊಪ್ಪಿಸಿದನು. ಶರಣರು ನ್ಯಾಯವಾದ ಜೀವನಕ್ರಮ ನಡಿಸಲು ಇದರಿಂದ ಸಹಾಯವಾದೀತೆಂದು ಬಸವಣ್ಣನವರೂ ಆಲೋಚಿಸಿದ್ದರು.

ಚೆನ್ನಬಸವಣ್ಣವರ ಸಮ್ಮತಿಯನ್ನು ತಿಳಿದುಕೊಂಡ ಮೇಲೆ ಬಿಜ್ಜಳನು

ಅವರ ನೇಮಕದ ಆಜ್ಞೆ ಹೊರಡಿಸಿದನು. ರಾಜಾಧಿಕರಣದ ರಥವನ್ನು ಕಳ್ಳಿ ಚೆನ್ನಬಸವಣ್ಣನವರನ್ನು ಬರಮಾಡಿಕೊಂಡು ಗೌರವಿಸಿ ಅಧಿಕಾರದ ಲಾಂ ನೀಡಿದನು. ಅವರ ಆಧೀನಕ್ಕೆ ಇಬ್ಬರು ಪರಾಯಿತರನ್ನು ನೇಮಿಸಿ ಮಹ ಕಳಿಸಿಕೊಟ್ಟನು.

---

## ೭. ಏರಿ ಬಂದ ಕಾರ್ಮೋಡಗಳು

ಮಹಾಮಂತ್ರಗಾರನಾದ ಬಿಜ್ಜಳನು ಒಂದು ಕೈಯಿಂದ ಶರಣ ಂತೈಸುತ್ತಿರುವಾಗಲೇ ಅತ್ತ ಇನ್ನೊಂದು ಕೈಯಿಂದ ಶರಣರ ದ್ವೇ ಯಾದ ಮಾಧವನಾಯಕನನ್ನು ದಂಡನಾಯಕ ಪದವಿಗೇರಿಸಿದನು. ಆಡಳಿತೆಯ ಪುನರ್ವ್ಯವಸ್ಥೆಯ ಆಟವಾಡಿ ಮಂಗಳವೇಡೆಗೆ ಹೋದ ಅಲ್ಲಿ ಸೋವಿದೇವನ ಪಟ್ಟಾಭಿಷೇಕ ನೆರವೇರಿಸಿ ಬೇಗನೆ ಮರಳಿ ಬಂ ಕೂಡಲೆ ರಾಜಪುರೋಹಿತನ ಮುಂದಾಳುತನದಲ್ಲಿ ಸನಾತನಿಗಳು ಒ ನಾಗರಿಕ ಬಿನ್ನಪವನ್ನು ಅವನಿಗೆ ಅರ್ಪಿಸಿದರು. ಕೆಲವು ಜೈನ ಪ್ರಮುಖ ಅದಕ್ಕೆ ಬೆಂಬಲ ನೀಡಿದರು. ಅದರಲ್ಲಿ 'ವರ್ಣಾಶ್ರಮ ಧರ್ಮಾಚಾರಕ್ಕೆ ವಿ ಧವಾದ ಮದುವೆಗೆ ಸಂಬಂಧಿಸಿದವರನ್ನು ಉಗ್ರವಾಗಿ ದಂಡಿಸಬೇಕು. ವ ಸಂಕರವನ್ನು ಪ್ರಚುರಗೊಳಿಸುತ್ತಿರುವ ಅನುಭವಮಂಟಪವನ್ನು ಶಾ ಬಾಹಿರ ಸಂಸ್ಥೆಯೆಂದು ಸಾರಬೇಕು' ಎಂದು ಬಿನ್ನವಿಸಲಾಗಿತ್ತು.

ಬಿಜ್ಜಳನು ಮಂತ್ರಿಗಳ ಸಭೆಯಲ್ಲಿ ಅದನ್ನು ಚರ್ಚೆಗಿಟ್ಟನು. ರಾ ಪುರೋಹಿತನು ಬಿನ್ನಪದ ಒಕ್ಕಣಿಕೆಯನ್ನು ಓದಿದನು. ಬಿಜ್ಜಳನು ಅಸ ಮದುವೆಯ ಅಪರಾಧಿಗಳ ಶಿಕ್ಷೆಯ ವಿಷಯವನ್ನು ಹಿಂದಿಟ್ಟು, ಮೊ ಅನುಭವಮಂಟಪದ ಮೇಲಿನ ಆಪಾದನೆಯನ್ನೇ ಕೈಗೆತ್ತಿಕೊಂಡು, ನೀವ ಹೇಳುವಿರಿ? ಎಂದು ಚೆನ್ನಬಸವಣ್ಣನವರನ್ನು ಕೇಳಿದನು. ಚೆನ್ನಬಸವ ವರು ಬಿನ್ನಪದ ಒಕ್ಕಣಿಕೆಯನ್ನು ನಿರಾಕರಿಸುತ್ತ ಹೀಗೆ ಹೇಳಿದರು:

"ಧಾರ್ಮಿಕವಾಗಿ ಸಾಮಾಜಿಕವಾಗಿ ಮಾನವಕುಲಕ್ಕೆ ಕಲ್ಯಾಣ ಲೆಂದೇ ಅನುಭವಮಂಟಪದ ಜನ್ಮತಾಳಿದೆ. ಪ್ರಭುತ್ವದಿಂದ ಮನ್ನಣೆ ದಿದೆ. ಈ ಮೊದಲೊಮ್ಮೆ ಪ್ರಭುಗಳ ಮುಂದೆ ದೂರು ಬಂ

ಬಸವೇಶ್ವರರು ಅನುಭವಮಂಟಪದ ಪವಿತ್ರ ಉದ್ದೇಶ ಮತ್ತು ರೀತಿನೀತಿಗಳನ್ನು ವಿವರವಾಗಿ ತಮ್ಮ ಗಮನಕ್ಕೆ ತಂದಿದ್ದರು. ಅನುಭವಮಂಟಪವು ಹನ್ನೆರಡು ವರ್ಷ ನಡಿಸಿದ ಪ್ರಯತ್ನದ ಫಲವಾಗಿ ನಾಡಿನಲ್ಲಿ ಶೈವಮಠಗಳೆಲ್ಲ ವಿದ್ಯಾ-ಜ್ಞಾನಪ್ರಸಾರಮಾಡುವ, ದೀನದರಿದ್ರರ ಕಷ್ಟನಿವಾರಿಸುವ ಕೇಂದ್ರಗಳಾಗಿವೆ. ಅವು ಸದಾಚಾರ, ಸದ್ಭಕ್ತಿ, ದುಡಿಮೆ, ಸ್ವಾವಲಂಬನೆಗಳಿಂದ ಕೂಡಿದ ಸಮತಾಧರ್ಮಸಮಾಜವನ್ನು ನಿರ್ಮಿಸುತ್ತಿವೆ. ಶ್ರೀಮಂತರು ಸಾಮಂತರು ಅಲ್ಲಲ್ಲಿ ಕೊಡುವ ದಾನ-ದತ್ತಿಗಳಿಂದ ಸರ್ವತ್ರ ಈ ಕಾರ್ಯ ನಡೆಯುತ್ತಿದೆ. ಅನುಭವಮಂಟಪ ಅವುಗಳಿಗೆ ತತ್ತ್ವದರ್ಶನ ಮಾಡಿ, ಮಾರ್ಗ ಸೂಚಿಸುತ್ತಿದೆ. ಇದನ್ನು ಸಂದೇಹದ ದೃಷ್ಟಿಯಿಂದ ನೋಡುವದು ಸತ್ಯದ ಅಪಚಾರ! ಪ್ರಗತಿಯನ್ನು ವಿರೋಧಿಸುವ ಸಂಪ್ರದಾಯದ ಅಂಥ ಪ್ರವರ್ತಕರು ಅದನ್ನು ನಿಂದಿಸಬಹುದು. ಅಂಥವರ ಬಿನ್ನಪವನ್ನು ಗಣನೆಗೆ ತಂದುಕೊಳ್ಳಬಾರದು. ಅದಕ್ಕೆ ಬೆಲೆ ಇಲ್ಲ."

ಕ್ರಮಿತನು ರೋಷದಿಂದ ಎದ್ದನು:

"ಒಳ್ಳೆಯ ಹೆಸರಿನಿಂದ ಅಸಂಗತ ಕಾರ್ಯ ನಡಿಸುತ್ತಿದೆ ಅನುಭವ ಮಂಟಪ! ಅದರ ಆಶ್ರಯದಲ್ಲಿ ಚಾಂಡಾಲರು ಶೂದ್ರರು ಸೇರಿ, ಉಚ್ಚ ವರ್ಣದವರನ್ನು ಧಿಕ್ಕರಿಸುತ್ತಿದ್ದಾರೆ. ಜಂಗಮರೆಂಬವರು ಸಮತೆಯ ನೆವದಲ್ಲಿ ಕೀಳುವರ್ಗದವರನ್ನು ಪ್ರಚೋದನೆಗೊಳಿಸಿ ರಾಜ್ಯದಲ್ಲಿ ಅರಾಜಕತೆಯನ್ನು ಉಂಟುಮಾಡುತ್ತಿದ್ದಾರೆ. ಕಾವಿಯ ವೇಷದಲ್ಲಿ ರಹಸ್ಯದಳಗಳನ್ನು ನಿರ್ಮಿಸುತ್ತಿದ್ದಾರೆ. ಆಡಳಿತದ ವ್ಯವಸ್ಥೆಯನ್ನು ಭಂಗಗೊಳಿಸುತ್ತಿರುವ ಅನುಭವ ಮಂಟಪವನ್ನು ಶಾಸನಬಾಹಿರ ಸಂಸ್ಥೆಯೆಂದು ಸಾರಿ, ಅದರ ಸೊತ್ತನ್ನೆಲ್ಲ ಪ್ರಭುತ್ವವು ವಶಪಡಿಸಿಕೊಳ್ಳಬೇಕೆಂದು ಸೂಚಿಸುತ್ತೇನೆ. ವರ್ಣಸಂಕರಕ್ಕೆ ಆಶ್ರಯ ಕೊಡುತ್ತಿರುವ ಶರಣರೊಡನೆ ಪ್ರಭುತ್ವವು ಕಠೋರವಾಗಿ ವರ್ತಿಸುವದೇ ವರ್ಣಧರ್ಮರಕ್ಷಣೆಯ ಉಪಾಯವಾಗಿದೆ."

ಬಹುಜನ ಮಂತ್ರಿಗಳು ಗಂಭೀರಮೌನ ತಾಳಿದರು. ಚೆನ್ನಬಸವೇಶ ಮಾತ್ರ ಪ್ರತಿಭಟಿಸುವದು ಅನಿವಾರ್ಯವಾಗಿತ್ತು:

"ಅನುಭವಮಂಟಪ ಮಾಡುವ ಸಾಮಾನ್ಯರ ಜ್ಞಾನಸಾಧನೆ, ಧರ್ಮದ ಉದ್ಧಾರ ಕಾರ್ಯಗಳು ಪ್ರತಿಗಾಮೀ ವಿರೋಧಿಗಳಿಗೆ ಬೇಡವಾಗಿವೆ. ಈ ಬಿನ್ನಪಕ್ಕೆ ಅದೇ ಕಾರಣವಾಗಿದೆ. ಸಾಮಾನ್ಯರು ಸುಧಾರಿಸಿದರೆ, ದಲಿತರು ಮುಂದೆ ಬಂದರೆ, ಈ ಪರಪುಷ್ಟಸಾಂಪ್ರದಾಯಕರ ವಿಲಾಸಜೀವನಕ್ಕೆ ತಡೆಯಾದೀತೆಂದು ಇವರಿಗೆ ಆತಂಕ! ಆರ್ಯ-ಅನಾರ್ಯ ಸಂಘರ್ಷಣದ ಕಾಳ

ಯುಗದಲ್ಲಿ ಉಂಟಾದ ಜಾತಿ-ಪಂಥ-ವರ್ಣಗಳು ಈ ಬುದ್ಧಿಯ ಬೆಳಕಿನ ಕಾಲದಲ್ಲಿಯೂ ಉಳಿಯಬೇಕೆನ್ನುವದು ಹಾಸ್ಯಾಸ್ಪದ! ನೀವು ಅನುಭವಮಂಟಪವನ್ನು ಶಾಸನಬಾಹಿರ ಮಾಡಬಹುದು, ಆದರೆ ಸಾಮಾನ್ಯರಲ್ಲಿ ಉಂಟಾದ ಆತ್ಮಾನುಸಂಧಾನದ ಭಾವನೆಯನ್ನು ಕಿತ್ತುಹಾಕುವದು ಅಸಾಧ್ಯ! ಅವರು ನಾಡಿನಲ್ಲಿ ನೂರಾರು ಸಾವಿರಾರು ಅನುಭವಮಂಟಪಗಳು ಉಂಟಾದಾಗ! ಅವುಗಳನ್ನೆಲ್ಲ ಅಕ್ರಮಗೊಳಿಸಬೇಕಾದೀತು! ಆಗ ರಾಜ್ಯದಲ್ಲಿ ಶಾಂತಿ-ಸುವ್ಯವಸ್ಥೆ ಉಳಿದೀತೇ? ಪ್ರಭುಗಳ ಪ್ರಬಲಕೀರ್ತಿ ಏನಾದೀತು? ಸತ್ಯಶುದ್ಧ ಪವಿತ್ರಭಾವನೆಯಿಂದ ಶಾಂತಿಸಾಧನೆ ನಡಿಸುತ್ತಿರುವ ಗುಂಪುಗಳನ್ನು ರಹಸ್ಯ ದಳಗಳೆಂದು ಕರೆಯುವದು ದುಸ್ಸಾಹಸದ ಮಾತು! ಇಂದು ಅನುಭವ ಮಂಟಪವನ್ನು ನ್ಯಾಯಬಾಹಿರ ಮಾಡಲಿಕ್ಕೆ ಕೇಳಿದವರು ನಾಳೆ ಶರಣರನ್ನು ನಾಡಿನಿಂದ ಓಡಿಸಲಿಕ್ಕೂ ಕೇಳಬಹುದು. ಈ ವಿನಾಶಕಾರೀ ಸೂಚನೆಯನ್ನು ಪ್ರಭುಗಳು ಸ್ಪಷ್ಟವಾದ ಅಭಿಪ್ರಾಯದಿಂದ ತಳ್ಳಿಹಾಕಬೇಕು. ಎರಡನೆಯದಾಗಿ ಮಧುವರಸು-ಹರಳಯ್ಯಗಳ ಮಕ್ಕಳ ಮದುವೆ ಅಕ್ರಮವೆಂದು ಮಾಡಲಾದ ಆಪಾದನೆಯನ್ನು ಪುನಃ ಪರಿಶೀಲಿಸಬೇಕು. ಪ್ರಭುಗಳ ನಿಷ್ಪಕ್ಷಪಾತ ಆಡಳಿತದಲ್ಲಿಯ ಜನತೆಯ ನಂಬಿಗೆಯನ್ನು ಕಾಪಾಡಿಕೊಳ್ಳಬೇಕು. ಇದು ನನ್ನ ನಯದ ಸೂಚನೆ"

ಬಿಜ್ಜಳನು ವಕ್ರವಾಗಿ ನೋಡಿ "ನ್ಯಾಯಾಸ್ಥಾನಕ್ಕೆ ಒಪ್ಪಿಸಿದ ಪ್ರಶ್ನೆಯನ್ನು ರಾಜಸಭೆ ಪರಿಶೀಲಿಸಲಿಕ್ಕಾಗದು ಚೆನ್ನಬಸವಣ್ಣನವರೇ" ಎಂದನು. ದನಿಯಲ್ಲಿ ಕೋಪ ಕಾಣಿಸಿಕೊಂಡಿತ್ತು.

ಮಾಧವನಾಯಕನು ಅರಸನಿಗೆ ತಲೆವಾಗಿ, ನಿಡಿದಾಗಿ ನಿಂತು ದರ್ಪದಿಂದ ನುಡಿದನು: "ಮಂತ್ರಿಮಂಡಲದಲ್ಲಿಯ ಈ ಭಿನ್ನಾಭಿಪ್ರಾಯ ಬಲಿತರೆ ಆಡಳಿತವೇ ಕುಸಿದೀತು? ಪ್ರಭುಗಳು ಇದನ್ನು ಕಟ್ಟು-ನಿಟ್ಟಾಗಿ ತೊಡೆದು ಹಾಕಬೇಕು."

"ಇದು ಸುಳ್ಳಲ್ಲ" ಎಂದು ಬಿಜ್ಜಳರಾಜನೆಂದಾಗ ಕ್ರಮಿತನ ಮುಖವು ಅಗಲವಾಗಿತ್ತು. ಚೆನ್ನಬಸವೇಶರ ದೃಷ್ಟಿ ಗಂಭೀರವಾಗಿತ್ತು. ಬಿಜ್ಜಳನು ಮುಂದುವರಿದನು:

"ಅನುಭವಮಂಟಪದ ನಡೆವಳಿಕೆಯ ಪರಿಶೀಲನೆ ಇನ್ನೂ ನಡೆಯಬೇಕಾಗಿದೆ. ಆದರ ಮೇಲಿನ ತೀರ್ಪು ಆ ಮೇಲಿರಲಿ! ಮದುವೆಯ ಅಪರಾಧಿಗಳ ವಿಚಾರಣೆ ನಡಿಸಲಿರುವ ನ್ಯಾಯಪೀಠದ ರಚನೆಯನ್ನು ಈಗ ಪ್ರಕಟಿಸುತ್ತೇನೆ. ಚೆನ್ನಬಸವಣ್ಣನವರು ಪುರೋಹಿತಕ್ರಮಿತರು ಮತ್ತು ನಾನ

ಹೀಗೆ ಮೂವರು ನ್ಯಾಯಮೂರ್ತಿಗಳು. ಆದರಲ್ಲಿ ನಾವು ಅಧ್ಯಕ್ಷರು. ಇಲ್ಲಿ ಆಗುವ ತೀರ್ಪು ಅಂತಿಮ! ಇಲ್ಲಿಗೆ ಇಂದಿನ ರಾಜಸಭೆ ಮುಕ್ತಾಯ!" ಬಿಜ್ಜಳನು ಎದ್ದನು. ಪ್ರತಿಗಾಮಿಗಳು ಗೆಲುವಿನ ನಗೆಯಲ್ಲಿ ನಡೆದರು.

ಚೆನ್ನಬಸವಣ್ಣ ಮಹಮನೆಯ ಬಾಗಿಲಿಗೆ ಬಂದಾಗ ಮಡಿವಳಮಾಚಯ್ಯ ಮುಂದಾಗಿ ಕಂಡು 'ಬಿನ್ನಪದ ಬಗೆಗೆ ತೀರ್ಮಾನವೇನು?' ಎಂದು ಕೇಳಿದನು. ಅಂಗಳದಲ್ಲಿ ಮಾದರಸು, ಉತ್ತಣ್ಣ, ಶಾಂತಯ್ಯ, ಕಿನ್ನರಯ್ಯ ಮೊದಲಾದವರು ಆಲಿಸಲು ಆತುರದಿಂದ ಸುತ್ತು ನೆರೆದರು.

ರಾಜಸಭೆಯಲ್ಲಿ ನಡೆದುದನ್ನು ವಿವರಿಸಿ ಚೆನ್ನಬಸವಣ್ಣನವರು 'ಯಾವಾಗ ಏನು ತೊಂದರೆ ಬಂದೀತೆಂಬುದನ್ನು ಹೇಳಲಿಕ್ಕಾಗದು' ಎಂದು ನೊಂದಮನದಿಂದ ನುಡಿದರು. ನೆರೆದ ಶರಣರವೃಂದದಲ್ಲಿ ಗಾಬರಿಯನ್ನು

ಮಾಚಯ್ಯನವರು: "ಬರುವದೆಲ್ಲಾ ಬರಲಿ, ಕಲಿದೇವರ ದೇವನಶರಣರು ಯಾರಿಗೂ ಅಹಿತ ಬಗೆದವರಲ್ಲ. ತಾಮಸಿಗಳಿಂದ ಬರುವ ಅಪಾಯಗಳನ್ನು ಗಣಾಚಾರದಿಂದ ಎದುರಿಸಲು ಸಿದ್ಧರಿದ್ದೇವೆ. ಚಿಂತೆ ಯಾಕೆ?" ಎಂದನು ಆವೇಶದಿಂದ! ಮೆಲ್ಲನೆ ಎಲ್ಲರೂ ಅಲ್ಲಿಂದ ಸರಿದರು.

ಅದೇ ದಿನ ರಾತ್ರಿ ಮಾಚಯ್ಯನಿಂದ ಆಜ್ಞಪ್ತರಾದ ನಾಲ್ವರು ತರುಣ ಶರಣರು ಐವತ್ತೈದೋಳಿಯ ಐನೂರ್ವರು ಗಣಾಚಾರದ ಯೋಧರ ಕಡೆಗೆ ಹೋದರು. ಅಲ್ಲದೆ ಚೆನ್ನಬಸವಣ್ಣನವರ ಸಲಹೆ ಪಡೆದು ಮಾಚಯ್ಯನು ರುದ್ರಮುನಿದೇವರಿಗೆ ಪರಿಸ್ಥಿತಿಯನ್ನು ತಿಳಿಸಲು ತಕ್ಕ ಜನರನ್ನು ಕಳಿಸಿದನು. ರುದ್ರಮುನಿಗಳು ಈಗ ಗೋವೆ, ಹೈವೆ, ಕದಂಬಾಳಿ ಪ್ರದೇಶಗಳಲ್ಲಿ ಶರಣಧರ್ಮಪ್ರಚಾರ ಮಾಡುತ್ತ ವೀರ ವ್ರತಿಗಳಾದ ಸಾಮಂತ ಮನ್ನೆಯರಿಂದ ಪೂಜೆಗೊಳ್ಳುತ್ತ ಸಂಚರಿಸುತ್ತಿದ್ದರು.

ನ್ಯಾಯಪೀಠದ ಮುಂದೆ ಅಪರಾಧಿಗಳು ಮದುವೆ ನಡೆದುದನ್ನು ಗಳೆಯಲಿಲ್ಲ. ಅದು ವರ್ಣಸಂಕರವೆಂಬುದನ್ನು ಒಪ್ಪಲಿಲ್ಲ. ಕ್ಷಮೆ ಕೇಳಲಿಲ್ಲ. ತಾವು ವರ್ಣಾಧರ್ಮದವರಲ್ಲವೆಂದು ಹೇಳಿಕೆ ಕೊಟ್ಟರು. ಬಿಜ್ಜಳನು ಅದನ್ನು ಗ್ರಹಿಸಲಿಲ್ಲ. ಮಧುವಯ್ಯ, ಹರಳಯ್ಯ, ಶೀಲವಂತ ಇವರಿಗೆ ವರ್ಣಸಂಕರ, ಶಿಷ್ಟತೆಯ ಅತಿಕ್ರಮಣ, ಕನ್ಯಾಪಹಾರ, ಶಾಂತಿ ಭಂಗ ಈ ಅಪರಾಧಗಳಿಗಾಗಿ ಮರಣದಂಡನೆ ವಿಧಿಸಿದನು. ಮಂಚಣ್ಣನೊಬ್ಬನ ಮತಭೇದವು ಬಿಜ್ಜಳನ ಕೋಪಕ್ಕೇ ಕಾರಣವಾಯಿತು. ಮಂಚಣ್ಣ ಮನೆಗೆ ಹೋಗಿ ಅಸ್ವಸ್ಥನಾಗಿ ಹಾಸಿಗೆ ಹಿಡಿದವನು ಮರಳಿ ಮೇಲಕ್ಕೆ ಏಳಲೇ ಇ

ಮೂವರಿಗೆ ಮರಣದಂಡನೆಯ ಸುದ್ದಿ ಮಹಮನೆಗೆ ಬರಸಿಡಿಲಿನಂತೆ ಎರಗಿತು. ಶರಣರು ಸಂತಾಪಗೊಂಡರು. ಚೆನ್ನಬಸವಣ್ಣನವರು ಪ್ರತಿಭಟನೆ ಮಂತ್ರಿಪದವಿಯನ್ನು ತ್ಯಜಿಸಿ, ರಾಜನೋಲಗದಿಂದ ನಡೆಯುತ್ತ ಮಹಮನೆಗೆ ಬಂದರು. ಇನ್ನು ತಾವು ವಿಪತ್ತಿಗೊಳಗಾಗುವದು. ಖಂಡಿತವೆಂದು ಶರಣ ಸಂದೋಹ ಕಲ್ಯಾಣವನ್ನು ಬಿಟ್ಟು ಹೋಗುವ ನಿರ್ಣಯಮಾಡಿತು. ನಗರ ದೊಳಗಿನ ಲಿಂಗವಂತರಿಗೂ ಗಂಡಾಂತರದ ಸೂಚನೆಕೊಟ್ಟು, ಅದೇ ಸಲಹೆ ನೀಡಿದರು. ಶೂನ್ಯಸಿಂಹಾಸನವನ್ನೂ ಹಿರಿದಾದ ಗ್ರಂಥರಾಶಿಯನ್ನೂ ಮೊದಲು ಪಾರುಗಾಣಿಸಬೇಕಾಗಿತ್ತು. ನಗರದ ಹೊರವಲಯದಲ್ಲಿರುವ ಮೋಳಿಗೆಯ ಮಾರಯ್ಯನವರು ಮಾಡಿದ ಸಾಹಸದ ವ್ಯವಸ್ಥೆಯಿಂದ ಅವುಗಳನ್ನು ಸಹ್ಯಾ ದ್ರಿಯ ಹಳವುಗಳಲ್ಲಿಯ ಉಳಿವೆಯ ಕಡೆಗೆ ಕಳಿಸಿದರು.

ಮರಣದಂಡನೆ ಕಾರ್ಯಗತವಾಗುವ ದಿನ ಬಂದಿತು. ಕಲಾವತಿಯು ತಂದೆ, ಮಾವ, ಪತಿ ಮೂವರ ಕೊಲೆಯಾಗುವದನ್ನು ನೆನಿಸಿ, ಅನ್ನ ನೀರು ಬಿಟ್ಟು, ಹೃದ್ರೋಗದಿಂದ ಹಾಸಿಗೆ ಹಿಡಿದಳು. ನಾಗಲಾಂಬೆ ಅವಳನ್ನು ತೊಡೆಯ ಮೇಲೆ ಮಲಗಿಸಿಕೊಂಡು ಉಪಚರಿಸಿದರು. ಚೆನ್ನಬಸವಣ್ಣನ ವರೂ ತುಂಬ ಕಳವಳಪಟ್ಟರು. ಅವರ ಊಹೆಯಲ್ಲಿ ಮುಂದಿನ ಚಿತ್ರ ಬಲು ಭೀಕರವಾಗಿ ಕಂಡಿತು. ಆ ಮೂವರನ್ನು ಎಳೆಹೂಟೆಯಿಂದ ಕೊಲ್ಲಲಾಯಿತು. ಶವಗಳನ್ನು ಸಮಾಧಿಗೊಳಿಸಲು ಶರಣರು ಅಧಿಕರಣದಿಂದ ಅಪ್ಪಣೆ ಪಡೆ ದ್ದರು. ಅದೇ ಸಮಯಕ್ಕೆ ಕಲಾವತಿಯೂ ಅಸುನೀಗಿದ್ದಳು. ತತ್ತ್ವನಿಷ್ಠೆಯಿಂದ ದುರಭಿಮಾನಿಗಳಿಗೆ ಬಲಿಯಾದ ಆ ಪವಿತ್ರ ಜೀವಿಗಳ ಪಾರ್ಥಿವ ಶರೀರ ಗಳನ್ನು ಅಖಂಡವಾಗಿ ಮಂತ್ರಪಠಣ ನಡೆಯುತ್ತಿರಲು ವಿಧಿಪೂರ್ವಕವಾಗಿ ಸಮಾಧಿಗೊಳಿಸಿದರು.

ಸರ್ವರೂ ಸಮಾಧಿಗೆ ಪುಷ್ಪಾಂಜಲಿ ಅರ್ಪಿಸಿ, ಭಾರವಾದ ಭಾವದಲ್ಲಿ ಕ್ಷಣ ಹೊತ್ತು ನಿಂತಾಗ ಚೆನ್ನಬಸವಣ್ಣನವರು ನಡೆದುದನ್ನು ನೆನಿಸಿಕೊಂಡು ನುಡಿದರು: "ರಾಜಸಭೆಯಲ್ಲಿ ನನಗೆ ದೊರೆತ ಉತ್ತರವನ್ನು ನೆನೆದರೆ, ವಿಚಾ ರಣೆಯ ಮೊದಲೇ ಈ ತೀರ್ಮಾನ ಮಾಡಿದ್ದರೆಂದು ಊಹಿಸಬಹುದಾಗಿದೆ. ಮೂವರು ಶರಣರ ಕೊಲೆ ಸಹಿಸಲಾಗದ ದುಃಖ! ಆದರೆ ದುಃಖಿಸುವದು ಶರ ಣರಿಗೆ ಸಲ್ಲದು. ಚೆನ್ನಸಂಗಯ್ಯನ ಕರುಣೆ ಹೇಗೋ ಹಾಗೆ ಆಗುತ್ತದೆ. ಇಷ್ಟಕ್ಕೆ ಇದು ಮುಗಿದಂತೆಯೂ ಅಲ್ಲ. ತೀರ್ಪು ಕೇಳಿದಾಗ ಮಧುವರಸರುನುಡಿದ ನುಡಿ ಅಂತರಾತ್ಮನ ಸಂದೇಶವಾಗಿದೆ. ಅವರು: 'ಶರಣರಿಗೆ ಅಗ್ನಿಪರೀಕ್ಷೆ ಒದಗಿದೆ. ನಾವು ಮೂವರು ಅದರಲ್ಲಿ ತೇರ್ಗಡೆ ಹೊಂದಿದ್ದೇವೆ, ಭಕ್ತಿಪ್ರಧಾನವಾದ ಶೈವ

ಧರ್ಮದಲ್ಲಿ ವೀರತ್ವವನ್ನು ಮೂಡಿಸಲು ಶರಣರು ಪಣತೊಡಬೇಕು. ನಮ್ಮ ಬಲಿದಾನ ಅವರಿಗೆ ಸ್ಫೂರ್ತಿ ನೀಡಲಿ......' ಎಂದು ಉದ್ಗರಿಸಿದುದು ಪರಿಸ್ಥಿತಿಯ ಚಿತ್ರವಾಗಿದೆ......."

ತತ್‌ಕ್ಷಣ ಮಾಚಯ್ಯ: "ಸತ್ಯವಿದು. ಶರಣಧರ್ಮರಕ್ಷಣೆಗೆ ವೀರ ಪಥವೇ ನನಗಿನ್ನು ಪಥವು! ಇದು ನನ್ನ ಪ್ರತಿಜ್ಞೆ!" ಎಂದು ನೂತನ ಸಮಾಧಿಯ ಮುಂದೆ ಪೈಯಿಕ್ಕಿ ವಂದಿಸಿದನು. ಕಂಠ ಬಿಗಿದು ಕೈಮುಗಿದರು ಶರಣರು.

ಮೋಳಿಗೆಯ ಮಾರಯ್ಯನವರು ಕೊನೆಗೆ, "ಅಗ್ರಜ ಅಂತ್ಯಜ ಇವು ವರ್ಣಧರ್ಮದ ಆ ಕಡೆಯ ಈ ಕಡೆಯ ದೂರದ ಎರಡು ತುದಿಗಳು. ಸಮತೆಯ ಗಾಳಿ ಬೀಸಿ, ಅಗ್ರಜನ ಪುತ್ರಿ ಅಂತ್ಯಜನ ಕೈಹಿಡಿದಳು. ಶಿವಭಕ್ತಿಯ ಸೂತ್ರ ಎರಡನ್ನೂ ಕೂಡಿಸಿತು. ನಿಷ್ಕಲಂಕ ಮಲ್ಲಿಕಾರ್ಜುನನಲ್ಲಿ ಶರಣರು ಸಾಧಿಸಿದ ಮಾನವತೆಯ ಮಹಾಸಿದ್ಧಿ ಇದು. ನಡೆಯಿರಿ. ಶಿವಾಯನಮಃ ಓಂ ......" ಎನ್ನುತ್ತ ಮುಂದೆ ನಡೆದರು.

• • •

ತನಗೆ ಮಣಿಯದ ಚಾಲುಕ್ಯರಾಣಿ ಮಾಹೇಶ್ವರಿಯ ಬಗೆಗೆ ಸಾಮಂತರ ಆದರಭಾವ ಕಡಿಮೆ ಮಾಡುವದಕ್ಕಾಗಿ, ಅವಳ ಶೀಲಕ್ಕೆ ಕಲಂಕ ಹಚ್ಚುವ ವಾರ್ತೆಗಳನ್ನು ಹುಟ್ಟಿಸಿ ಹರಡುವ ಕೀಳು ಕೆಲಸಕ್ಕೂ ಬಿಜ್ಜಳನಿಳಿದಿದ್ದನು. ಅದರಿಂದ ಕ್ರುದ್ಧಳಾದ ರಾಣಿ, ಮೈದುನ ಜಗದೇಕ ಮಲ್ಲನಿಗೆ ಗುಪ್ತವಾಗಿ ಪತ್ರ ಬರೆದು ಮೊಗೆಯಿಟ್ಟಳು. ತಮ್ಮ ಸಾರ್ವಭೌಮ ಮನೆತನದಲ್ಲಿ ಅವನ ಅಭಿಮಾನ ಜಾಗ್ರುತಗೊಳ್ಳುವಂತೆ ಮಾಡಿ ಬಿಜ್ಜಳನನ್ನು ಕೊಲ್ಲಲು ಪ್ರಾರ್ಥಿಸಿದಳು. ತಮ್ಮ ಸಂಚಿನ ಕೊನೆಯ ಹಂತವೇ ಈಗ ಕಾರ್ಯಗತವಾಗಬೇಕಾಗಿತ್ತು. ಇದಕ್ಕಾಗಿಯೇ ಮಲ್ಲಿಬೊಮ್ಮರಸನು ಬ್ರಹ್ಮೇಂದ್ರ ಶಿವಯೋಗಿ ಎಂಬ ಹೆಸರಿನಿಂದ ಜಗದೇಕಮಲ್ಲನ ಧರ್ಮೋಪದೇಶಕನಾಗಿ ಅವನನ್ನು ಕೂಡಿಕೊಂಡಿದ್ದನು.

ಶರಣರು ವಲಸೆ ಹೋಗುವರೆಂಬುದು ಬಿಜ್ಜಳನಿಗೆ ಗೊತ್ತಾಯಿತು. ಅದರಿಂದ ರಾಜ್ಯದಲ್ಲೆಲ್ಲ ತನ್ನ ಬಗೆಗೆ ಅಪಚಾರ ಹರಡುವದೆಂದು ಭಾವಿಸಿದನು. ಕೂಡಲೇ ರಾಜಾಧಿಕರಣದ ಚಾವಡಿಗೆ ಚೆನ್ನಬಸವಣ್ಣನವರನ್ನು ಕರೆಯಿಸಿಕೊಂಡು ಕೇಳಿದನು.

"ಇದೇನು ನಿಮ್ಮ ಗದ್ದಲ?"

"ನಮ್ಮ ಗದ್ದಲ ಇಲ್ಲದಂತಾಗುವದಕ್ಕೇ ನಾವು ಹೊರಟು ಹೋಗುತ್ತೇವೆ ಪ್ರಭುಗಳೇ!"

"ಹಾಗೆ ಹೋಗಿ ನೀವು ರಾಜ್ಯದಲ್ಲಿ ಅಶಾಂತಿಯನ್ನು ಹರಡುತ್ತೀರಿ"

"ಹಾಗೇನಿಲ್ಲ; ನಾವು ನೆಟ್ಟಗೆ ಉದ್ದೇಶಿಸಿದ ಸ್ಥಳಕ್ಕೆ ಹೋಗುತ್ತೇವೆ."

"ಈ ತ್ವರಿತ ತೀಕ್ಷ್ಣ ಬದಲಾವಣೆಯಿಂದ ಜನರ ಮೇಲಾಗುವ ಪರಿಣಾಮವನ್ನು ನೀವು ಅರಿಯಿರಿ! ನೀವು ಹೋಗಲಾಗದು"

"ನಮಗೆ ಇರಲೂ ಆಗದು; ಶರಣರ ನಿರ್ಣಯ ಅಚಲ!"

"ಪರಿಣಾಮವು ಏನಾದೀತು ನೋಡಿಕೊಂಡು ಹೋಗಿರಿ."

"ಆದದ್ದು ಆಗಲಿ ಪ್ರಭುಗಳೇ ...ಬರುತ್ತೇನೆ" ಕೈಮುಗಿದನು.

"ಒಳ್ಳೆಯದು" ಹುಬ್ಬುಗಂಟಿಕ್ಕಿ ಹೇಳಿದನು ಬಿಜ್ಜಳನು. ಅಂದು ರಾತ್ರಿ ಸೇರಲಿದ್ದ ಗುಪ್ತರಾಜಸಭೆಯಲ್ಲಿ ಶರಣರ ನಿರ್ಮೂಲನದ ನಿರ್ಣಯ ಮಾಡಲು ಹವಣಿಸಿದ್ದ ಬಿಜ್ಜಳನು ಆಗಲೇ ಚೆನ್ನಬಸವಣ್ಣನವರನ್ನು ಬಂಧಿಸದೆ ಸಡಿಲು ಬಿಟ್ಟನು. ಚೆನ್ನಬಸವಣ್ಣ ಮಹಮನೆಗೆ ಬಂದು ಸಂದರ್ಶನದ ಸ್ವರೂಪವನ್ನು ತಿಳಿಸಿದನು.

ಮಡಿವಳ ಮಾಚಯ್ಯನು ಅನುಭಾವದಲ್ಲಿ ಪರಿಣತನಾಗಿರುವಂತೆ ರಾಜಕೀಯದಲ್ಲಿಯೂ ನಿಪುಣನು. ಈ ಆಪತ್ಕಾಲದಲ್ಲಿ ಅವನು ಚೆನ್ನಬಸವಣ್ಣನವರಿಗೆ ಮುಂಜಾಗ್ರತೆಯ ಕಟು ಸೂಚನೆಗಳನ್ನು ನೀಡುವದರಲ್ಲಿ ಹಿಂದಾಗುತ್ತಿರಲಿಲ್ಲ.

"ಆಪತ್ತು ಸನಿಹದಲ್ಲಿ ಬಂದಿದೆ. ತೀರ ಹತ್ತಿರ ಬಂದಿದೆ. ಮಹಮನೆಯ ಸುತ್ತಲು ಸೈನ್ಯ ನಿಲ್ಲಬಹುದು. ನಗರದ ಮಹಾದ್ವಾರಗಳನ್ನು ಮುಚ್ಚಿಬಿಡಬಹುದು. ಇಂದಿನ ರಾತ್ರಿ ಮಹಾರಾತ್ರಿ; ಎರಡನೆಯ ಪ್ರಹರದಲ್ಲಿ ಬಂಡಿಗಳು ಸಿದ್ಧವಾಗಿ ನಿಂತಿರಬೇಕು." ಎಂದು ಎಲ್ಲರನ್ನು ಎಚ್ಚರಿಸಿ ಮಹದ್ವಾರಗಳ ಅನುಕೂಲತೆ ಪಡೆಯಲು ಅತ್ತ ಹೋದನು.

ಬಿಜ್ಜಳನು ಮಂತ್ರಿಗಳ ದಳಪತಿಗಳ ಗುಪ್ತಸಭೆ ಸೇರಿದನು. ಮುಖ್ಯ ಶರಣರನ್ನು ಸೆರೆಹಿಡಿದು ಅನುಭವಮಂಟಪ ಮಹಮನೆಗಳನ್ನು ವಿಧ್ವಂಸಗೊಳಿಸಬೇಕೆಂದು ಅಲ್ಲಿ ಗೊತ್ತು ಮಾಡಲ್ಪಟ್ಟಿತು. ಆದರೆ ಶರಣರ ಸಿದ್ಧತೆ ಪೂರ್ಣವಾಗಿತ್ತಾದ್ದರಿಂದ ಅವರು ಅದೇ ರಾತ್ರಿ ನಗರದಿಂದ ಹೊರಬಿದ್ದು ಹೋದರು. ರಾಜಸಭೆಯ ಕಾಲಕ್ಕೆ ಸೆರೆಮನೆಯ ಕಾವಲು ಶಿಥಿಲಗೊಂಡುದನ್ನು ಸಾಧಿಸಿ ಜಗದೇಕಮಲ್ಲ ಬೊಮ್ಮರಸರು ಯುಕ್ತಿಯಿಂದ ಪಾರಾಗಿ ವೇಷ ಮರೆಯಿಸಿ ಬಿಜ್ಜಳನ ಪರಿವಾರದಲ್ಲಿ ಸೇರಿ ಹಠಾತ್ತಾಗಿ ಅವನ ಕೊಲೆ ಮಾಡಿದರು. ಕೂಡಲೆ ಹರಳಯ್ಯ ಮಧುವಯ್ಯಗಳನ್ನ ಕೊಲ್ಲಿಸಿದ ಬಿಜ್ಜಳನನ್ನು ಕೊಂದ ವೀರರು ನಾವು; ಜಗದೇವ ಮಲ್ಲಿಬೊಮ್ಮಯ್ಯಗಳು ನಾವು' ಎಂದು ಕೂಗುತ್ತ ಓಡಿದರು. ತಡೆಯ ಬಂದ ಭಟರಿಂದ ಜಗದೇವ ಹತನಾದನು. ಮಲ್ಲಿಬೊ

ವ್ಮರಸು ಪಾರಾದನು. ಕಲ್ಯಾಣನಗರವು ಪ್ರಕ್ಷುಬ್ಧವಾಯಿತು. ಮರುದಿನ ದಳಪತಿಯ ದಂಡಾಳುಗಳು ಮೊದಲು ಮಹಮನೆಗೆ ನುಗ್ಗಿ ಅದನ್ನೂ, ಅನು ಭವಮಂಟಪವನ್ನೂ ನೆಲಸಮ ಮಾಡಿದರು, ಶರಣರ ಸಲಹೆಯನ್ನು ಮೀರಿ ನಗರದಲ್ಲಿಯೇ ಉಳಿದ ಲಿಂಗವಂತ ಮಠಾಧೀಶರ ಭಕ್ತರ ಜಂಗಮರ ಕಗ್ಗೊ ಲೆಯಾಯಿತು. ಶಿವಪುರ ಮುಂತಾದ ಮಹಾನಗರದ ಭಾಗಗಳು ನಾಶವಾದವು. ಕಲ್ಯಾಣ ಹಾಳಾಯಿತು.

ಮಂಗಳವೇಡೆಯಿಂದ ಸೋವಿದೇವನು ಬಂದು ಆಡಳಿತವನ್ನು ವಹಿಸಿ ಕೊಂಡಮೇಲೆಯೇ ನಗರಜೀವನದ ಪುನರಾರಂಭವಾಯಿತು, ಕೊಲೆಗಡಕರು ಕೂಗಿದ ಶಬ್ದದಿಂದ ಹರಳಯ್ಯ-ಮಧುವಯ್ಯಗಳ ಕೊಲೆಯ ಸೇಡಿಗಾಗಿ ಶರ ಣರಿಂದಲೇ ಬಿಜ್ಜಳನ ಕೊಲೆಯಾಯಿತೆಂಬ ಪೊಳ್ಳುವಾರ್ತೆಯ ಪ್ರಸಾರವಾ ಯಿತು. ಸೋವಿದೇವನಿಗೆ ತಂದೆಯ ಕೊಲೆಯ ನಿಜವಾದ ಕಾರಣ ತಿಳಿ ಯಲು ಬಹಳ ದಿವಸ ಹಿಡಿಯಿತು. ಅಲ್ಲಿಯವರೆಗೆ ಆತನು ಶರಣರನ್ನು ದಂಡಿಸಲು ದಂಡು ಕಳಿಸುತ್ತಿದ್ದನು

ಆ ದಿನ ರಾತ್ರಿಯಲ್ಲಿ ಕಲ್ಯಾಣದಿಂದ ಹೊರಬಿದ್ದ ಶರಣರು ಬೆಳಗಿನಲ್ಲಿ ಒಂದುಗೂಡಿ ಮುಂದೆ ಸಾಗಿ ಮಧ್ಯಾಹ್ನಕ್ಕೆ ಮೊದಲನೆಯ ಬೀಡಾರ ಮಾಡಿ ದರು. ಅಲ್ಲಿ ಯಾತ್ರಾದಳದ ಪ್ರಯಾಣಕ್ಕೆ ಅವಶ್ಯವಾದ ವ್ಯವಸ್ಥೆ ಮಾಡಿ ಕೊಂಡರು. ಶಸ್ತ್ರಧಾರಿಗಳನ್ನು ಬೇರ್ಪಡಿಸಿ ಹಿಂದೆಮುಂದೆ ಇರುವಂತೆ ಯೋಚಿ ಸಿದರು. ಇನ್ನುಳಿದ ಕೆಲಸಗಳಲ್ಲಿ ವಿಭಾಗಮಾಡಿ ಪ್ರತಿಯೊಂದಕ್ಕೆ ಹಿರಿಯ ರನ್ನು ಗೊತ್ತುಮಾಡಿದರು. ಕಲ್ಯಾಣದಲ್ಲಿ ನಡೆದ ಅನಾಹುತಗಳನ್ನು ಶರ ಣರ ವಲಸೆಯ ಸುದ್ದಿಯನ್ನು ಅಣ್ಣನವರಿಗೆ ತಿಳಿಸಲು ಅಪ್ಪಣ್ಣನನ್ನು ಸಂಗಮಕ್ಕೆ ಮುಂದೆ ಕಳಿಸುವ ವ್ಯವಸ್ಥೆ ಮಾಡಿದರು. ಈ ಕಾರ್ಯಕ್ರಮ ಮುಗಿದು ಮೇಲೇಳುವಾಗ ಅಂಧಾಭಿಮಾನಿ ತರುಣರು ಕೆಲವರು:

"ಬಿಜ್ಜಳನ ವಧೆ ಪರವಾದಿಗೆ ಸರಿಯಾದ ಅಂತ್ಯ!
ಹರಳಯ್ಯ-ಮಧುವಯ್ಯಗಳ ಕೊಲೆಯ ಸೇಡು ತೀರಿತು.
ಶಿವದ್ರೋಹಕ್ಕೆ ತಕ್ಕಶಿಕ್ಷೆ!" ಎಂದು ಕೂಗಾಡಿದರು.

ಚೆನ್ನಬಸವಣ್ಣನವರು ಕಾತರದಿಂದ ಮಾಚಯ್ಯನ ಮುಖ ನೋಡಿದರು. ಮಾಚಯ್ಯನು ಅವರೆಲ್ಲರಿಗೆ ಸುಮ್ಮನಾಗಲು ಸನ್ನೆಮಾಡಿ ಹೇಳಿದನು:

"ದಯವಿಟ್ಟು ಕುಳಿತು ಮತ್ತೆರಡು ಮಾತು ಕೇಳಿರಿ, ನೀವೀಗ ಕೂಗಿದ ಘೋಷಣೆಯಿಂದ ನನಗೆ ದುಃಖವಾಗುತ್ತದೆ. ಚನ್ನಬಸವಣ್ಣನವರೂ ಕಳವಳ ಗೊಂಡಿದ್ದಾರೆ. ಬಿಜ್ಜಳನು ಮೂವರೂ ಶರಣರನ್ನು ಅನ್ಯಾಯವಾಗಿ ಕೊಲ್ಲಿ

ಸಿದನು. ಶರಣರನ್ನು ನಿಗ್ರಹಿಸುವದು ಅವನ ಉದ್ದೇಶವಾಗಿತ್ತು. ನಿಜ, ಆದರೆ ಇದಕ್ಕಾಗಿ

ಬಿಜ್ಜಳರಾಜನ ವಧೆಯನ್ನು ಶರಣರು ಬಯಸಲಿಲ್ಲ.
ಆ ಸಂಚಿನಲ್ಲಿ ಸೇರಿಯೂ ಇಲ್ಲ.
ಈಗ ನಮಗೆ ಅದರಿಂದ ಸಂತೋಷವೂ ಆಗಿಲ್ಲ...."

ಅಷ್ಟರಲ್ಲಿ, ಅನರ್ಥಪರಂಪರೆಗಳ ನೆನಹಿನಿಂದ ನೊಂದು ಶಕ್ತಿಗುಂದಿದ ಚೆನ್ನಬಸವಣ್ಣನವರು ಮೆಲ್ಲನೆ ಎದ್ದು ನಿಂತಿದ್ದರು. "ಬಿಜ್ಜಳನ ಅತ್ಯಾಚಾರದಿಂದ ಸರ್ವಸ್ವದ ಬಲಿಯಾಗಬಾರದೆಂದು ಸ್ವಧರ್ಮದ ಬಲಿಯಾಗಬಾರದೆಂದು, ಸ್ವಧರ್ಮದ ರಕ್ಷಣೆಗೆ ವಲಸೆ ಹೊರಟಿದ್ದೇವೆ. ಬಿಜ್ಜಳನು ನೀಡಬಹುದಾದ ಕಷ್ಟಗಳಿಗಿಂತ, ಅವನ ಕೊಲೆಯಾದುದರಿಂದ ಹೆಚ್ಚಿನ ಕಷ್ಟಗಳಿಗೆ ನಾವು ಗುರಿಯಾಗುತ್ತಿದ್ದೇವೆ. ಬಿಜ್ಜಳನ ಮರಣದಿಂದ ಸಂತೋಷಗೊಳ್ಳುವವರು ಕೆಲವರಾದರೂ ಇದ್ದರೆ ಅವರು ತಮ್ಮ ತಪ್ಪು ತಿಳಿದುಕೊಳ್ಳಬೇಕು" ಎಂದರು. ಅವರ ಕಳವಳದ ನುಡಿ ಕೇಳಿ ಕೂಗಾಡಿದವರು ಶಿರ ತಗ್ಗಿಸಿದರು.

ಮುಂಬಂದ ಪ್ರಾತಃಕಾಲದಲ್ಲಿ ಶರಣರು ಸಕಲೇಶ ಮಾದರಸರನ್ನು ಶ್ರೀಶೈಲಕ್ಕೆ ಬೀಳ್ಕೊಟ್ಟು ಶಿಬಿರವನ್ನು ಕಿತ್ತು ಮುಂದುವರೆದರು. ತಂಗಡಿಯ ಹತ್ತಿರ ಕೃಷ್ಣೆಯನ್ನು ದಾಟಿ ಬಸವಣ್ಣನವರನ್ನು ಕಂಡು ವಲಯದಲ್ಲಿಯ ಉಳವಿಗೆ ಹೋಗುವ ಯೋಜನೆಯಿತ್ತು. ಶರಣರ ಧುರೀಣೆ ಅಕ್ಕನಾಗಮ್ಮ ನೀಲಾಂಬೆ ಗಂಗಾಂಬೆಯರು ಆ ತಂಡದಲ್ಲಿದ್ದರು. ಸೊನ್ನಲಿಗೆಯನ್ನು ತಲುಪಿದಾಗ ಸಿದ್ಧರಾಮ ಶಿವಯೋಗಿಗಳು ಗುರು ಭಕ್ತಿಯಿಂದ ಮಹಾನುಭಾವರ ಪರಾಮರಿಕೆ ಮಾಡಿ ಮುಂದೆ ಕಳುಹಿದರು. ಮಾಚಯ್ಯನವರ ಮೂಲ ಸ್ಥಳವಾದ ದೇವರ ಹಿಪ್ಪರಗಿಯನ್ನು ದಾಟಿ ಸ್ವಲ್ಪದೂರ ಬಂದಿದ್ದರು. ಅಷ್ಟರಲ್ಲಿ ಶರಣರನ್ನು ಹಿಡಿಯಲು ಹೊರಟ ಮಾಧವನಾಯಕನ ತಂಡವೊಂದು ಅವರನ್ನು ತಡೆಯಿತು. ಗಣಾಚಾರದ ಯೋಧರು ಶೂಲದಬೊಮ್ಮಯ್ಯನ ನೇತೃತ್ವದಲ್ಲಿ ಹೋರಾಡಿ ಅದನ್ನು ಹಿಂದಕ್ಕೆ ಅಟ್ಟಿದರು. *

* ಈ ಭಾಗದಲ್ಲಿ ಈ ಹೋರಾಟದ ಸ್ಮಾರಕಗಳಿವೆ. ಶರಣರು ಶಿಬಿರವಿಟ್ಟರಬಹುದಾದ ಬೊಮ್ಮಪ್ಪನ ಗುಡ್ಡೆಂಬ ಮರಡಿಯಿದೆ. ಅಲ್ಲಿಯ ಒಂದು ಸಲುಗಲ್ಲನ್ನು ಬೊಮ್ಮಪ್ಪನೆಂದು ರೈತರು ಪೂಜಿಸುತ್ತಾರೆ. ಸುತ್ತಲಿನ ಅಳ್ಳಿಚಂಡಿ, ಕರಿಬಂಟನಾಳ, ಕುದುರೆ ಸಾಲವಾಡಗಿ ಈ ಮುಂತಾದ ಊರುಗಳ ಹೆಸರುಗಳು ಈ ಹೋರಾಟದ ಸ್ಮಾರಕಗಳಾಗಿವೆ. ಇದೇ ಭಾಗದಲ್ಲಿಯ ಯಾಳವಾರ ಗ್ರಾಮದ ಸೋಮನಾಥ ದೇವಾಲಯದ ಮುಂದೆ, ಕುದುರೆ ಹತ್ತಿದ ಜಟಾಧಾರಿ ಶಿವಯೋಗಿಯ ವಿಗ್ರಹವೊಂದಿದೆ. ಅದು ಚೆನ್ನಬಸವಣ್ಣನವರದೆಂದು ಪರಂಪರೆಯ ಹೇಳಿಕೆಯಿದೆ. ಸಂಶೋಧನೆಗೆ ಪ್ರಚೋದನೆಗೊಳಿಸುವ ಈ ವಿವರಗಳನ್ನು ಯಾಳವಾರದ ಹಿರಿಯರು ರಾಮನಗೌಡರು ನೀಡುತ್ತಿದ್ದಾರೆ.

ಶರಣರು ತಂಗಡಿಗೆ ಬಂದು ತಲುಪುತ್ತಿರುವಾಗ, ಸಂಗಮದಿಂದ ಕೃಷ್ಣೆಯನ್ನು ದಾಟಿ ಬಂದ ಅಪ್ಪಣ್ಣನು ಗದ್ಗದಿತ ಕಂಠನಿಂದ, ಬಸವಣ್ಣನವರು ಬಯಲಾದುದನ್ನು ಅರುಹಿದನು. ಶರಣ ಸಂದೋಹ ಶೋಕಸಾಗರದಲ್ಲಿ ಮುಳುಗಿತು. ಶಿಬಿರದವರೆಲ್ಲ ಅವನ ಸುತ್ತ ನೆರೆದರು. ಅಪ್ಪಣ್ಣನು ಅಣ್ಣನವರ ಲಿಂಗೈಕ್ಯದ ವಿವರಗಳನ್ನು ಕಣ್ಣೀರು ಕರೆಯುತ್ತಲೇ ಹೇಳಿದನು. ಕೇಳುವವರ ಕಂಬನಿಗಳೂ ಉದುರುತ್ತಿದ್ದವು. ಭಾವಾವೇಶದಿಂದ ಚೆನ್ನಬಸವಣ್ಣನವರು ನುಡಿದರು.

"ಲಿಂಗ ಜಂಗಮ, ಜಂಗಮ ಲಿಂಗವೆಂಬುದ ತೋರಿ
ನಿಜೈಕ್ಯನಾದೆಯಲ್ಲಾ ಬಸವಣ್ಣಾ!
ಪ್ರಸಾದ ಕಾಯ, ಕಾಯಪ್ರಸಾದವೆಂಬುದ ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ,
ಎನ್ನನಾಗುಮಾಡಿ ಮುಂದುವರಿದೆಯಲ್ಲಾ ಬಸವಣ್ಣಾ!
ಲಿಂಗಪ್ರಾಣ, ಪ್ರಾಣಲಿಂಗವೆಂಬುದು ಎನ್ನ ಅಂತರಂಗದಲ್ಲಿ ಸ್ಥಾಪ್ಯವ ಮಾಡಿ
ಎನ್ನ ನಿನ್ನಂತೆ ಮಾಡಿ ನಿರವಯವಾದೆಯಲ್ಲಾ ಬಸವಣ್ಣಾ!
ಎನ್ನ ಮನವ ಮಹಾಸ್ಥಲದಲ್ಲಿ ಲಯವ ಮಾಡಿ
ನಿರ್ವಯಲಾಗಿ ಹೋದೆಯಲ್ಲಾ ನಿಜಲಿಂಗೈಕ್ಯ ಬಸವಣ್ಣಾ!
ನಿನ್ನ ಒಕ್ಕುಮಿಕ್ಕ ಶೇಷವನಿಕ್ಕಿ ಆಗುಮಾಡಿ
ನಿನ್ನ ಅಂತರಂಗದಲ್ಲಿ ಅವ್ವೆ ನಾಗಾಯಿಯ ಇಂಬುಗೊಂಡೊಡೆ
ಎನ್ನ ಮನ ನಿಮ್ಮ ಪಾದದಲ್ಲಿ ಕರಗಿ ಕೊರಗಿತ್ತಯ್ಯಾ ಬಸವಣ್ಣಾ
ಕೂಡಲಚೆನ್ನಸಂಗಯ್ಯಂಗೆ ಸುಜ್ಞಾನವಾಹನನಾಗ ಬೇಕೆಂದು
ನಿರವಯವವಾದೆಯಲ್ಲಾ ಸಂಗನ ಬಸವಣ್ಣಾ!"

ಮೇರುವಿನಂತೆ ಧೀರೆಯಾದರೂ ನಾಗಕ್ಕನ ಕಳವಳಗೊಂಡ ಹೃದಯದಿಂದ ಹೊರಹೊಮ್ಮಿದ ದು:ಖೋದ್ಗಾರಗಳಿವು:

"ನೀವು ಮರ್ತ್ಯಕ್ಕೆ ಬಂದು ನಿಂದೊಡೆ ಭಕ್ತಿಯು ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತ್ತಯ್ಯಾ ಬಸವಣ್ಣಾ! ಶಶಿಧರನಟ್ಟಿದ ಮಣಿಹ ಪೂರೈಸಿತ್ತೆಂದು ನೀವು ಲಿಂಗೈಕ್ಯವಾದಡೆ ಭಕ್ತಿ ಸದಾಚಾರ ನಿಮ್ಮೊಡನೆ ಹೋದವಯ್ಯಾ ಅಸಂಖ್ಯಾತರು ಹೋದರೋ ಅಣ್ಣಾ! ಮರ್ತ್ಯಲೋಕದ ಮಹಮನೆ ಶೂನ್ಯವಾಯಿತ್ತೋ ಬಸವಣ್ಣಾ"

ಹಲವರು ಹಲವು ಬಗೆಯಾಗಿ ಬಸವಣ್ಣನವರನ್ನು ನೆನೆಪು ನುಡಿದರು. ಅವುಗಳಲ್ಲಿ ಮಾಚಯ್ಯನ ಉದ್ಗಾರ ಮತ್ತಿಷ್ಟು ಹೃದಯಸ್ಪರ್ಶಿಯಾಗಿತ್ತು.

"ಆಕಾರ ನಿರಾಕಾರವಾಯಿತ್ತಲ್ಲಾ ಬಸವಣ್ಣಾ!
ಪ್ರಾಣ ನಿಷ್ಪ್ರಾಣವಾಯಿತ್ತಲ್ಲಾ ಬಸವಣ್ಣಾ!
ಲಿಂಗಜಂಗಮದ ಮಾಟಕೂಟ ಸಮಾಪ್ತಿಯಾಯಿತ್ತಲ್ಲಾ ಬಸವಣ್ಣಾ

ನಿಶ್ಶಬ್ದವೇದ್ಯವಾದೆಯಲ್ಲಾ ಬಸವಣ್ಣಾ!
ಕಲಿದೇವರ ದೇವನ ಹೃದಯ ಕಮಲವ ಹೊಕ್ಕು
ದೇವರಿಗೆ ದೇವನಾಗಿ ಹೋದೆಯಲ್ಲಾ ಸಂಗನ ಬಸವಣ್ಣಾ"

ಹೃದಯ ಹಣ್ಣಾಗಿ ಅಸ್ವಸ್ಥಳಾಗಿದ್ದ ನೀಲಾಂಬೆ, ಅವಳ ಶುಶ್ರೂಷೆಯಲ್ಲಿದ್ದ ಗಂಗಾಂಬೆ ಇವರು ಗೂಡಾರದಲ್ಲಿಯೇ ಬಸವಣ್ಣ ಬಯಲಾದ ಸುದ್ದಿ ಕಿವಿಗೆ ಬೀಳಲು ಅಪಾರ ದುಃಖಕ್ಕೊಳಗಾದರು. ನೀಲಾಂಬೆಯು ಗಂಗಕ್ಕನ ಆಸರದಲ್ಲಿ ಎದ್ದು ಕುಳಿತು, ಕರದಿಷ್ಟ ಲಿಂಗದಲ್ಲಿ ದೃಷ್ಟಿಯನ್ನು ನಿಲ್ಲಿಸಿ, ಆ ಲಿಂಗಧ್ಯಾನದಲ್ಲಿ ಬಸವಯ್ಯನ ಧ್ಯಾನವನ್ನು ಲೀನಗೊಳಿಸಿ ಒಳಹೊರಗಡಗಿ ನಿಶ್ಶೂನ್ಯದಲ್ಲಿ ಬಯಲಾಗಿ ಹೋದಳು. ನೀಲಾಂಬೆ ಲಿಂಗೈಕ್ಯಳಾದುದು ಹೊರಗೆ ಗೊತ್ತಾದೊಡನೆ ನಾಗಲಾಂಬೆ ಧಾವಿಸಿ ಬಂದಳು ಶರಣರು ಬಂದು ನೆರೆದರು ಒಂದರ ಮೇಲೊಂದು ಆಘಾತ! ಅವರೆಲ್ಲರು ಕಳವಳಗೊಂಡು ಕುಳಿತರು. ಶಿವನಿಚ್ಛೆಯೆಂದು ಸಹಿಸಲೇ ಬೇಕು: ನೀಲಾಂಬೆಯ ಶರೀರವನ್ನು ಸಮಾಧಿಗೊಳಿಸಿದರು. ನೀಲಮ್ಮನ ಬಸವೇಶರ ಗದ್ದುಗೆಗಳ ಸೇವೆಮಾಡುತ್ತ ಅಪ್ಪಣ್ಣ ಅಲ್ಲಿಯೇ ಉಳಿಯುವವನಾದನು.

ಅದೇ ಸಮಯಕ್ಕೆ ಸೋವಿದೇವನ ಮತ್ತೊಂದು ದಳವು ಶರಣರ ಮೇಲೇರಿ ಬಂದಿತು. ತಾಳಿಕೋಟೆಯ ವಿರುಪರಸರು ಕಳುಹಿದ ರಕ್ಷಣಾಭಟರನ್ನು ಕೂಡಿಕೊಂಡು ಶರಣರು ಆ ದಳವನ್ನು ಹೊಡೆದಟ್ಟಿದರು. ಬಳಿಕ ಹೊಳೆ ದಾಟಿ ಸಂಗಮಕ್ಕೆ ಬಂದರು.

ಸಂಗಮವು ಜಾತವೇದ ಮುನಿಗಳ ಪುಣ್ಯಭೂಮಿ. ಬಸವಣ್ಣ ಚೈತನ್ಯವನ್ನು ಸಂಪಾದಿಸಿದ ಜ್ಞಾನ ಭೂಮಿ. ಆ ಜ್ಞಾನವನ್ನು ನಾಡಿನಲ್ಲಿ ಹರಡಿ ಬಯಲಾದ ಯೋಗ ಭೂಮಿ! ಅವರೆಲ್ಲರಿಗೆ ಬಸವಭಾವವೇ ಭಾವ! ಬಸವ ತತ್ತ್ವವೇ ತತ್ತ್ವ! ಬಸವಣ್ಣನವರ ಗದ್ದುಗೆಯ ಮುಂದೆ ಗಣಾಚಾರದವರು ದಳಬದ್ಧವಾಗಿ ನಿಂತರು. ಉಳಿದವರು ಓರಣವಾಗಿ ಎಡಬಲದಲ್ಲಿ ನಿಂತರು. ಐದು ನಿಮಿಷ ಮೌನವನ್ನು ಆಚರಿಸಿ ಶ್ರದ್ಧೆಯನ್ನು ಅರ್ಪಿಸಿದರು. ಬಳಿಕ ಮಾಚಯ್ಯ ನಾಗಲಾಂಬೆ ಕಡೆ ನೋಡಿ 'ಅಕ್ಕನವರು ಅಪ್ಪಣೆ ಕೊಡಿಸಬೇಕು' ಎಂದನು. ಮುಂದಿನ ನಿರ್ಧಾರದ ನಿಲುಮೆಗೆ ಬಂದಿದ್ದ ಅಕ್ಕ ನಾಗಮ್ಮನವರಿಗೆ ಅದನ್ನು ವ್ಯಕ್ತಗೊಳಿಸುವದಕ್ಕೆ ಅವಕಾಶ ಬೇಕಾಗಿತ್ತು.

"ಬಸವಣ್ಣ ಭೂಮಿಗೆ ಭಕ್ತಿಯ ಬೆಳಕ ತಂದನು. ಗುರುಲಿಂಗ ಜಂಗಮ ಪೂಜೆಯ ಪ್ರಚುರ ಪಡಿಸಿದನು. ಲಿಂಗಾಂಗ ಸಾಮರಸ್ಯ ಸಾಧೆಯ ತೋರಿದನು. ಭಕ್ತಭಕ್ತರಲ್ಲಿ ಸಮಭಾವ ಸಾರಿದನು. ಎನ್ನ ಕಂಗಳಲ್ಲಿಯ ಎನ್ನ ಮನಭಾವಗಳಲ್ಲಿ ಎನ್ನ ಅಂತರಂಗದಲ್ಲಿ ತುಂಬಿನಿಂದಾತ ಬಸವಣ್ಣ! ಬಸವಣ್ಣನ

ಲೋಕಕಲ್ಯಾಣದ ಮಣಿಹವೇನಮ್ಮೆಲ್ಲರ ಮಣಿಹವಾಗಲಿ. ಅದರ ಸಾಧನೆಗಾಗಿ ನನ್ನ ಇನ್ನುಳಿದ ಜೀವನ ಮುಡಿಪು" ಎಂದು ಕೈಮುಗಿದಳು.

ಮಾಚಯ್ಯನ ದೃಷ್ಟಿ ಚೆನ್ನಬಸವಣ್ಣನವರತ್ತ ಹೊರಳಿತು. ಚೆನ್ನಬಸವಣ್ಣನವರು ಹೃದಯ ತೆರೆದು ನುಡಿದರು:

"ಶ್ರೀ ಗುರುಬಸವ, ಬಸವತಂದೆ ಬಯಲಾದ ವ್ಯಥೆಯನ್ನು ಸಹಿಸಬೇಕಾದದ್ದು ನಮ್ಮ ಸತ್ವಪರೀಕ್ಷೆಯಾಗಿದೆ. ಅದನ್ನು ಸಹಿಸಿ ಅವರ ಕಾರ್ಯಗಳನ್ನು ಮುಂದುವರಿಸುವಲ್ಲಿಯೇ ನಮ್ಮ ಉತ್ತೀರ್ಣತೆಯಿದೆ. ಅವರು ಮೂಡಿಸಿದ ಮಾನವತೆಯ ಧ್ಯೇಯ ನಮ್ಮ ಕಣ್ಣ ಮುಂದಿದೆ. ಅದನ್ನು ಪೂರ್ತಿಗೊಳಿಸಲು ಯತ್ನಿಸುವದೇ ಈ ಸಹನೆಯ ಶಕ್ತಿಯಾಗಿದೆ. ಬಸವೇಶ್ವರರು ಭಕ್ತಿಪಥದಲ್ಲಿ ನಮ್ಮನ್ನು ನಡಿಸಿದರು. ನಿತ್ಯ ಧರ್ಮನೀತಿಗಳನ್ನುಣಿಸಿ ಪೊರೆದರು. ತನ್ನ ಅವಯವಗಳಿಂದಲೇ ತನ್ನ ಬಾಧಿಸಿಕೊಂಡ ಸಮಾಜಪುರುಷನ ಬಂಧನ ಬಿಡಿಸಿದರು. ಸಮತೆ ಶಾಂತಿ ತುಷ್ಟಿಗಳಿಂದ ಸಮಾಜಪುರುಷನನ್ನು ಸಂತೋಷಗೊಳಿಸಿದರು. ಸರ್ವರಲ್ಲಿಯೂ ಶಿವನನ್ನು ಕಂಡು ಕಸವಲ್ಲಿ ರಸವನ್ನು ತೋರಿದ ಮಹಾತ್ಮರವರು. ಅವರ ನಡೆನುಡಿಗಳು ದಾರಿದೀಪ ನಮಗೆ! 'ನಿದಾನವನರಿಯ ಹೋದರೆ ವಿಘ್ನಬಾರದೆ ಬಿಡದು' ಸದಾಶಿವನ ಪೂಜೆಗೂ ಸಕಲ ವಿಪತ್ತುಗಳು ಮುತ್ತುವವು. ನಾವು ಎದೆಭಂಗವಿಲ್ಲದೆ ನಿಲ್ಲಬಲ್ಲಡೆ ಪರಮಸುಖ ಸಾಧ್ಯ! ಈ ಪರಿಸ್ಥಿಯಲ್ಲಿ ಅವರ ಈ ಮಾತು ನಮಗೆ ತಾರಕ:

ಅಂಜಿದರಾಗದು ಅಳುಕಿದರಾಗದು, ವಜ್ರಪಂಜರದೊಳಗಿಟ್ಟರಾಗದು.
ತಪ್ಪದುವೋ ಲಿಲಾಟ ಲಿಖಿತ! ಕಕ್ಕುಲತೆಗೆ ಬಂದರೆ ಆಗದು ನೋಡಾ.
ಧೃತಿಗೆಟ್ಟು ಮನಧಾತುಗೆಟ್ಟರೆ ಬಪ್ಪುದು ತಪ್ಪದು ಕೂ. ಸಂ. ದೇವಾ

ಇನ್ನು ನಮ್ಮ ಕರ್ತವ್ಯ ಸ್ಪಷ್ಟವಿದೆ. ಬಸವೇಶ್ವರರ ಸದಾಚಾರ ಸದ್ಭಕ್ತಿ ಶಿವಯೋಗಗಳನ್ನು ನೆಲೆಗೊಳಿಸುವ ಕಾರ್ಯವನ್ನು ಮುಂದುವರಿಸುವದೇ ಆ ಕರ್ತವ್ಯ! ಅದನ್ನು ನೆರವೇರಿಸುವ ದೃಢಸಂಕಲ್ಪ ಮಾಡೋಣ! ನಿಮ್ಮ ಹೃದಯಾಂತರ್ಗತ ಕೂಡಲ ಚೆನ್ನಸಂಗಯ್ಯ ದಾರಿ ತೋರಲಿ!"

ಬಳಿಕ ಮಡಿವಳ ಮಾಚಯ್ಯನ ವೀರವಾಣಿಯಿದು:

"ನಮ್ಮ ಪ್ರಮಥ ಗಣಂಗಳು ಉಳಿವೆಯ ಮಹಮನೆಗೆ
ಹೋದ ಪರಿಯಂತ ಒಬ್ಬರನ್ನು ಬಿಟ್ಟೆನಾದೊಡೆ
ನನ್ನ ಕೈಯೊಳಗಿರ್ಪ ವೀರಭದ್ರ ವಿಜಯವೆಂಬ ಖಡ್ಗ
ಉರಿದೆದ್ದು ಸಿಡಿದು ಹೋಗಲಿ ಕಲಿದೇವರ ಸಾಕ್ಷಿಯಾಗಿ"

ಶರಣದಲ ಅಲ್ಲಿಂದ ಸರಿದು ನದೀತೀರದಲ್ಲಿ [illegible] ಗುರುಕು

ಲದ ಪ್ರಾಧ್ಯಾಪಕರು ಬಂದು ಅಕ್ಕನಾಗಮ್ಮ, ಚೆನ್ನಬಸವಣ್ಣ ಗಂಗಾಂಬೆಯ ರನ್ನು ಆಶ್ರಮದಲ್ಲಿ ಬಿಜಯಂಗೈಸಿಕೊಂಡರು. ಮೂವರೂ ಜಾತವೇದಿ ಗುರುಗಳ ಗದ್ದುಗೆಯನ್ನು ಸಾರಿ ಸಾಷ್ಟಾಂಗವೆರಗಿ ಪುಷ್ಪಾರ್ಚನೆಯನ್ನು ಸಲ್ಲಿಸಿದರು. ತಂದಗಾಗಿ ಕುಳಿತ ಮಗಳಂತೆ ಕುಳಿತು ಅಕ್ಕ ಕಂಬನಿ ಕರೆದಳು. ಗುರುಗಳ ನಗೆಮೊಗ, ನಲುಮೆಯ ನೋಟ, ಹುರುಪುಗೊಳಿಸುವ ಹಸ್ತವಿನ್ಯಾಸ, ಕಾರುಣ್ಯರಸ ತುಂಬಿದ ಹರವಾದ ಎದೆ, ಪಾಂಡಿತ್ಯದ ಪ್ರತೀಕದಂತಿರುವ ದೂಪಣೆ ಅವಳ ಒಳಗಣ್ಣ ಮುಂದೆ ಬಂದು ನಿಂತವು. ಚೆನ್ನಬಸವಣ್ಣನವರಿಗೂ, ಬಾಲ್ಯದಲ್ಲಿತನ್ನನ್ನು ತೊಡೆಯ ಮೇಲೆ ಕೂಡ್ರಿಸಿ, ಕೈಹಿಡಿದು ಆಡಿಸಿ ತತ್ತ್ವ ನೀತಿಗಳ ಮಾತುಗಳನ್ನು ಕಲಿಸಿದ ಆಗಿನ ಆ ಅಜ್ಜನವರ ನೆನಪು! ಅವರ ನಿಲುವನ್ನು ಕಣ್ಮುಚ್ಚಿ ಧ್ಯಾನಿಸಿದರು. ಗುರುವಿನ ಗುರು ಆ ಪರಮ ಗುರುವಿನ ಗದ್ದುಗೆಗೆ ಮತ್ತೊಮ್ಮೆ ಸಾಷ್ಟಾಂಗವಾಗಿ ಎರಗಿದರು.

ಹದಿನಾರು ವರ್ಷಗಳಹಿಂದೆ ಅಕ್ಕನವರ ಪ್ರೀತಿಯ ಒಡನಾಡಿಗಳಾಗಿದ್ದವರೆಲ್ಲ ಅಲ್ಲಿ ಬಂದರು. ಅವರನ್ನು ಕಂಡರು. ಬಾಲಲೀಲೆಯ ಬೆಳಕನೀಡುತ ಆಶ್ರಮದಲ್ಲೆಲ್ಲ ಓಡಾಡುತಿದ್ದ ಚೆನ್ನಬಸವಣ್ಣ ಈಗ ಸುಜ್ಞಾನನಿಧಿ ಶಿವಯೋಗಿಯಾಗಿದ್ದಾರೆ. ಈ ಸವಿನೆನಪು ಸವಿಯುವದರೊಡನೆ ಆ ಬಳಗದ ಹೃದಯದ ಒಂದು ಭಾಗದಲ್ಲಿ ಬಸವೇಶ ನೀಲಬ್ಬೆಯರ ಲಿಂಗೈಕ್ಯದ ಕಳವಳ. ಅಕ್ಕನೇ ಅವರೆಲ್ಲರನ್ನೂ ಸಂತೈಸಿ ಅಂದಿನ ಆತ್ಮೀಯರನ್ನು ಮಾತನಾಡಿಸಿದಳು. ಈ ಮಹಾ ತಾಯಿ, ಕಾಣ ಬಂದ ಹಿರಿಯರಿಗೆ ಈ ವಿಪತ್ಕಾಲದಲ್ಲಿಯೂ ಅಂದಿನ ಆ ಶಾಂತಮೂರ್ತಿ ನಾಗಲಾಂಬಿಯಾಗಿಯೇ ಕಂಡಳು ನಾಗಮ್ಮನ ಗುರುಭಕ್ತಿ, ಸಹಚರಿಯರಲ್ಲಿ ಪ್ರೀತಿ, ಆಶ್ರಮದ ಕಾರ್ಯನಿರ್ವಹಣೆಯಲ್ಲಿ ಆಸಕ್ತಿ, ತತ್ತ್ವವಿವೇಚನಾ ಶಕ್ತಿ ವಿದ್ಯಾಪೀಠದಲ್ಲಿ ಅಭಿಮಾನ, ಮಹಿಳೆಯರಿಗೆ ನೀಡುತ್ತಿದ್ದ ಮಾರ್ಗದರ್ಶನ, ಶಾಂತ ಭಾವ, ನಿರರ್ಗಳ ಮಾತು ಇವೆಲ್ಲ ಅವರ ಸ್ಮರಣೆಗೆ ಬಂದು ಆ ಪೂಜ್ಯಗಳಿಗೆ ಪೊಡಮಟ್ಟು ಗೌರವಿಸಿದರು.

ಕಲ್ಯಾಣದಿಂದ ಶರಣರು ಬಂದಾರೆಂಬರೆ ಸುತ್ತಲಿನ ಗ್ರಾಮಗಳ ಜನರೂ ಬಂದು ಸೇರಿದರು. ಆ ನೆರವಿ ಬಸವೋತ್ಸವವಾಗಿ ಪರಿಣಮಿಸಿತು. ಆತ್ಮತೃಷೆಯ ಸ್ಥಳೀಯ ಸಾಧಕರು ಚೆನ್ನಬಸವಣ್ಣನವರ ಪ್ರವಚನ ಆಲಿಸುವ ಆತುರದಿಂದ ಬಸವೇಶ್ವರರಿಗೆ ಶ್ರದ್ಧಾರ್ಪಣೆ ಮಾಡಲು ಸಂಜೆಗೆ ಗೋಷ್ಠಿಯನ್ನು ಏರ್ಪಡಿಸಿದರು. ಅಕ್ಕನಾಗಲಾಂಬೆ ಅಧ್ಯಕ್ಷಿಣೆ! ಈ ಸಭೆಯು ಬಸವೇಶ-ನಿಲಾಂಬೆಯರು ಬಯಲಾದುದಕ್ಕೆ ಶೋಕ ಪ್ರದರ್ಶನ ಮಾಡಿ, ಅವರ ನೀತಿ ತತ್ತ್ವಗಳ ಪ್ರಸಾರಣೆಗೆ ಪ್ರತಿಜ್ಞೆಯನ್ನು ಸ್ವೀಕರಿಸಿದಂತಾಯಿತು.

ಚೆನ್ನಬಸವಣ್ಣನವರ ಪ್ರಕಾಶಮಯವಾಣಿ ಹೊರಬಂದು ಹರಿಯಿತು. ಸಂಗಮದ ಸಸಿ ಗಿಡವಾಗಿ ಮರವಾಗಿ ರಸವತ್ಫಲವಾಗಿ ಬಂದು ಬಸವತತ್ತ್ವದ ರಸಸುರಿಯಿತು. ಅವರು ಬಸವಣ್ಣನವರ ಸತ್ಯ ಶುದ್ಧವಾದ ಆಚರಣೆಯನ್ನು ಅದನ್ನು ಒರೆಗೆ ಹಚ್ಚಲು ಒದಗಿದ ಅವರ ಜೀವನದಲ್ಲಿಯ ಘಟನೆಗಳನ್ನು ಹೃದಯಂಗಮವಾಗಿ ವಿವರಿಸಿದರು. ಅವರ ವಚನಗಳನ್ನು ಪ್ರಮಾಣವಾಗಿಸಿದರು. ವಂಚನೆ ಇಲ್ಲದೆ ಒಂದೇಮನ, ಒಂದೇ ಮಾತು, ಒಂದೇ ನಡೆಯಾದುದು ಸತ್ಯಾಚರಣೆ! ತ್ರಿಕರಣ ಪೂರ್ವಕವಾಗಿ ತಿಲಮಾತ್ರವೂ ಪರರನ್ನು-ಸಕಲ ಪ್ರಾಣಿಗಳನು-ನೋಯಿಸದಿರುವದೇ ಶುದ್ಧಾಚರಣೆ. ಸತ್ಯಶುದ್ಧ ಆಚರಣೆಯಿಲ್ಲದವರ ಅಂತರಂಗ ಕಲುಷಿತವಾಗಿರುವದು ಅಲ್ಲಿ ಶಿವನಿರಲಾರನು. ಅಣ್ಣನವರು ಹೇಳಿದ್ದಾರೆ:

"ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡಯನಿದ್ದಾನೋ ಇಲ್ಲವೋ?
ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲ ಸಂಗಮದೇವಾ"

ಸತ್ಯವಾಗಿರದ ಶುದ್ಧವಾಗಿರದ ಆಚಾರ ಪ್ರಾಣವಿಲ್ಲದ ದೇಹದಂತೆ ನಿರರ್ಥಕ ಮಾವುತ ಆನೆಯನೇರಿದ್ದರೂ ಚಕ್ರೇಶ್ವರನಾಗಲಾರ. ತೊತ್ತಿಗೆ ರತ್ನಾಭರಣಗಳನ್ನು ಇಡಿಸಿ ತೊಡಿಸಿ ದಂಡಿಗೆಯ ನೇರಿಸಿದರೂ ರಾಣಿಯಾಗಳು ವೇದಾಗಮ ಶಾಸ್ತ್ರ ಪುರಾಣಗಳ ಓದಿದ ಮಾತ್ರಕ್ಕೆ ನಡೆನುಡಿ ಪೂರಾಯವಾದ ಪುರಾತನರಾಗಲಾರರು. ಖ್ಯಾತಿಗಾಗಿ ನಿಜತತ್ತ್ವವನೋದಿ ಕೇಳಿ ಹೇಳಿದೊಡೇನು? ಅದಕ್ಕೆ ತಕ್ಕ ಅರಿವು ಆಚಾರ ನಡೆನುಡಿಯಲ್ಲಿ ನಿರ್ಣಯವಿಲ್ಲದೊಡೆ ಕೂಡಲ ಚೆನ್ನಸಂಗಯ್ಯ ಸನಿಹಬಾರನು" ಎಂದು ಬಳಿಕ ಮತ್ತೆ ಕೈಮುಗಿದು.

"ಅಂತರಂಗದಲ್ಲಿ ಅರಿವು ಪರಿಪೂರ್ಣ, ಬಹಿರಂಗದಲ್ಲಿ ದಾಸೋಹ ಸಂಪನ್ನ
ಮನೋವಾಕ್ಕಾಯ ಕರ್ಮಂಗಳಲ್ಲಿ ಸದ್ಭಕ್ತಿ ಸಂಪನ್ನ
ಎಡೆದೆರಹಿಲ್ಲದ ಲಿಂಗ ಸಂಪನ್ನ, ಸರ್ವಾಂಗದಲ್ಲಿ ಸದಾಚಾರ ಸಂಪನ್ನ
ಇಂತಿಪ್ಪನಾಗಿ ಕೂಡಲಚೆನ್ನಸಂಗಮ ದೇವರಲ್ಲಿ ಬೆರೆದು ಬೇರಾಗದಿಪ್ಪ
ಸಂಗನಬಸವಣ್ಣನ ಸಂಪ್ರದಾಯದ ಕಂಡ ನೋಡಾ ನಾನು
ಶ್ರೀಗುರು ಬಸವ ಜಯತು, ಬಸವ ತಂದೆ ಜಯತು."

ಬಸವಭಾವದಲ್ಲಿ ನಿಬ್ಬೆರಗಾಗಿದ್ದರು ಅಧ್ಯಕ್ಷಿಣಿ ನಾಗಮ್ಮನವರು. ಬಸವಣ್ಣ ಬಯಲಾದ್ದುದಕ್ಕಿಂತ ಬಸವಣ್ಣ ಹೂಡಿದ ಲೋಕಕಲ್ಯಾಣಕಾರಕ ಕಾರ್ಯ

ಗಳ ಯೋಜನೆಯು ಚಿಂತೆ ಹೆಚ್ಚಾಗಿತ್ತು ಅವರಿಗೆ! ಅದನ್ನು ಹೊತ್ತು ನಿರ್ವ ಹಿಸುವ ಚೆನ್ನಬಸವಣ್ಣನವರ ಭಾವದಿಂದ ಆ ತಾಯಿಯ ಆತ್ಮಕ್ಕೆ ಬೆಳಕು ಟಾಗಿತ್ತು. ಅವರ ಅಖಂಡ ಧೀರ ಜೀವನಕ್ಕೆ ಹೊಸ ಚೇತನದ ಅಭಿಷೇಕ ವಾಗಿತ್ತು. ಅವರು ಪರಾತ್ಪರ ವಸ್ತುವನ್ನು ಸ್ಮರಿಸಿ ಕೈಮುಗಿದು.

"ಆಚಾರವೆಂಬುದು ಅಗೋಚರ. ಅನುಭಾವಗೋಚರ. ಬಸವಣ್ಣ ಮರ್ತ್ಯಕ್ಕೆ ಬಂದು ಸದಾಚಾರದ ಬೆಳವಿಗೆಯು ಮೆರಿಸಿದ. ಶಿವಾಚಾರದಲ್ಲಿ ಸಂಶ ಹಗೊಂಡ ಬಿಜ್ಜಳನನ್ನು ತಿಳುಹಿ ಒಡಂಬಡಿಸಿದ. ತಾನು ಲಿಂಗದೊಳಗಾಗಲು ಹಿಂದೆ ಲೋಕಬದುಕಲೆಂದು ಸೆರಗ ಕೊಟ್ಟ. ಅವನ ಆದರ್ಶವೇ ಆ ಸೆರಗು ಆ ಸೆರಗ ಹಿಡಿದು ಸಾಗಲು ಚನ್ನಬಸವಣ್ಣ ಸಂಕಲ್ಪಿಸಿದ್ದಾರೆ. ಆ ಪ್ರಕಾಶ ದಲ್ಲಿ ನಾವು ಮುಂದುವರೆಯು ಬೇಕು, ಸಕಲರ ಲೇಸನೇ ಬಯಸಿ ಎಸಗಬೇಕು. ಎಡರು ತೊಡರುಗಳು ಎದುರಾದರೆ ಎದೆಗೆಡದೆ ನೋಡಿ ತಡೆದು ಪರಿಹರಿಸ ಬೇಕು. ಅದೇ ಬಸವಣ್ಣನವರ ಭಕ್ತಿ! ಇನ್ನು ದು:ಖಿಮುಮ್ಮಾನಗಳೇಕೆ? ಬಸವ ಲಿಂಗಾ ಜಯತು"

* * * *

ಸೋತು ಹೋದ ಕಲ್ಯಾಣದ ದಂಡಾಳುಗಳು ತನ್ನ ಮುಂದೆ ನಿಂತಾಗ ಸೋವಿದೇವನು ಚೆನ್ನಬಸವಣ್ಣನವರಲ್ಲಿಟ್ಟ ಆದರ ಭಾವವನ್ನು ಅಳಿಸಿಕೊಂಡನು ತನ್ನ ಭಾವನಾದ ಚಾವುಂಡರಾಯ (ಅಳಿಯ ಬಿಜ್ಜಳ)ನೊಡನೆ ಶರಣರನ್ನು ದಂಡಿಸಲು ಹೆಚ್ಚಿನ ದಳ ಕಳುಹಿದನು. ಈ ಸುದ್ದಿ ಸಂಗಮಕ್ಕೆ ತಲುಪಿತು ಆದಷ್ಟು ಬೇಗ ಮಲೆಯುವನ್ನು ಸೇರಿ ತಮ್ಮ ರಕ್ಷಣೆ ಮಾಡಿಕೊಳ್ಳಲು ಶರ ಣರು ಬಯಸಿದರು. ಕೂಡಲೆ ಅಲ್ಲಿಯ ಶಿಬಿರವನ್ನೆತ್ತಿ ಪಶ್ಚಿಮಕ್ಕೆ ಪ್ರಯಾಣ ಮಾಡಿದರು.

---

# ೮ ಸಹಜ ಕರ್ತವ್ಯ-ಕ್ರಿಯಾಯೋಗ.

ಕಲ್ಯಾಣವು ಪ್ರಕ್ಷುಬ್ಧವಾದಾಗ ಹರಳಯ್ಯನ ಸಮಾಜದವರ ಮೇಲೆ ಸಾಂಪ್ರದಾಯಿಕರಿಂದ ದಾಳಿಯಾಗುವ ಭೀತಿ ಉಂಟಾಯಿತು. ಆದರಿಂದ ಹರಳಯ್ಯನ ಶಿಷ್ಯರ, ಬಂಧುಬಾಂಧವರ ಒಂದು ತಂಡವು ತಡವಾಗಿ ಕಲ್ಯಾಣದಿಂದ ಹೊರಬಿದ್ದಿತು. ಅವರು ಚೆನ್ನಬಸವಣ್ಣನವರ ಸಮುದಾಯವನ್ನು ಸೇರಲು ಸೊನ್ನಲಿಗಿಗೆ ಬಂದರು, ಆದರೆ ಆ ದೊಡ್ಡ ಗುಂಪು ಮುಂದೆ ಹೋಗಿದ್ದಿತು. ಆದ್ದರಿಂದ ಸೇರವಾಗಿ ಹೋಗಿ ಅವರನ್ನು ಕೂಡುವದಕ್ಕಾಗಿ ಬಿಜ್ಜಳನಹಳ್ಳಿ (ವಿಜಯಪುರ) ಕಡೆಗೆ ಹೊರಟರು.

ವಿಜಯಪುರ (ವಿಜಾಪುರ)ದಿಂದ ದಕ್ಷಿಣಕ್ಕೆ ಆರುಹರದಾರಿ ( ೩೨ ಕಿ. ಮೀ. ) ಅಂತರವಲ್ಲಿರುವ ಒಂದು ಪ್ರಶಸ್ತ ವನಪ್ರದೇಶದಲ್ಲಿ ಬೀಡಾರ ಮಾಡಿದರು. ಅಲ್ಲಿಯ ಒಂದು ಚಿಕ್ಕ ಸರವು ಬತ್ತಿದ್ದರಿಂದ ನೀರು ಇರಲಿಲ್ಲ. ಹರಳಯ್ಯನ ಪರಮಶಿಷ್ಯ ಪರಮಯ್ಯನು ರೆಂಪಿಗೆಯಿಂದ ಸರವಿನಲ್ಲಿ ಸ್ವಲ್ಪ ಕೆದರಲು ವಿಪುಲ ವಾರಿ ಬಂದಿತು. ಅಲ್ಲಿ ಕೆಲವು ದಿವಸವಿದ್ದು ಅವರು ಮುಂದೆ ಹೋದರು. ಅವರು ಬೀಡಾರ ಮಾಡಿದ ಆ ಸ್ಥಳದಲ್ಲಿ ಹರಳಯ್ಯನಗುಂಡ, ಹರಳಯ್ಯನ ಗುಡಿ ಈ ಸ್ಮಾರಕಗಳಾಗಿವೆ.

ನುಲಿಯಚಂದಯ್ಯ ಡೋಹರಕಕ್ಕಯ್ಯ ಇವರು ಕಲ್ಯಾಣದಿಂದ ಬೇರೆಯಾಗಿ ಹೊರಟು, ಕೆಲವು ದಿವಸಗಳ ಮೇಲೆ ಶರಣರ ತಂಡವನ್ನು ಕೂಡಿಕೊಂಡರು.

ಸಂಗಮದಿಂದ ಪಯಣಿಸಿದ ಶರಣರ ತಂಡಕ್ಕೆ ಅಭಿಮಾನಿಗಳಾದ ಸಾಮಂತರು ಮಂಡಲಾಧಿಪತಿಗಳು ಕಳುಹಿಸುತ್ತಿದ್ದ ಭಟರ ತಂಡಗಳು ಬಂದು ಕೂಡುತ್ತ ರಕ್ಷಕದಳವು ದೊಡ್ಡದಾಯಿತು. ಅದಕ್ಕೆ ತಕ್ಕಷ್ಟು ಧಾನ್ಯದವಸಗಳೂ ಹೇರಿ ಬರುತ್ತಿದ್ದವು. ವಿರೋಧಿ ಸೈನ್ಯವು ಸಮೀಪಿಸುತ್ತಿರುವ ಸುದ್ದಿಯೂ ಬರುತ್ತಿದ್ದಿತು. ಈ ಆಪತ್ಕಾಲದಲ್ಲಿ ರಕ್ಷಕದಳದ ಅಧಿಪತಿಯಾದ ಮಾಸಯ್ಯನಂತೆ ಚೆನ್ನಬಸವಣ್ಣ ನಾಗಮ್ಮ ಗಂಗಾಂಬೆಯರೂ ತಮ್ಮ ಮೃದುಭಾವದಲ್ಲಿ ಸಮಯಕ್ಕೆ ತಕ್ಕ ವೀರವೃತ್ತಿಯನ್ನೂ ಅಳವಡಿಸಿಕೊಂಡರು. ಕೊರಗಲ್ಲ ಸೀಮೆಗೆ ಬಂದರು.

ಚಾಲುಕ್ಯಚಕ್ರಾಧಿಪತ್ಯವು ಒಡೆದು ಹೋಗಿದ್ದಿತು. ಬಿಜ್ಜಳನ ರಾಜ್ಯಾಪಹಾರವನ್ನು ಮನ್ನಿಸಿರದಿದ್ದ ಚಿಕ್ಕದೊಡ್ಡ ಮಂಡಲಾಧಿಪತಿಗಳು ಸಾಮಂತರು ತಮ್ಮ ಮೇಲಿನ ಸೋವಿದೇವನ ಪ್ರಭುತ್ವವನ್ನು ನಿರಾಕರಿಸಿದ್ದರು. ಇವರಲ್ಲಿ ಕರ್ಹಾಡ-ಕರವೀರಪುರಗಳ ಶಿಲಾಹಾರರು, ಸ್ವಾತಂತ್ರ್ಯ ಘೋಷಿಸಿ ಗೋವೆ

ಬನವಾಸಿಗಳ ಕದಂಬರು ಮುಖ್ಯರಾಗಿದ್ದರು. ಇವರ ರಾಜ್ಯಗಳಲ್ಲಿಯ ಮನ್ನೆಯರು ಶರಣರನ್ನು ತಮ್ಮಲ್ಲಿ ಬರಮಾಡಿಕೊಂಡು ಅವರ ದಳಕ್ಕೆ ಶಸ್ತ್ರಸಾಮಗ್ರಿಗಳನ್ನು ಒದಗಿಸುತ್ತಿದ್ದರು. ಕಲ್ಯಾಣದಲ್ಲಿ ಅಕ್ಕನಾಗಮ್ಮನ ಹಿರಿಯ ವ್ಯಕ್ತಿತ್ವವನ್ನು ಕಂಡವರು ಚೆನ್ನಬಸವಣ್ಣನವರ ಸಮ್ಯಗ್‌ಜ್ಞಾನದ ಆಳವನ್ನು ಅರಿತು ಅನುಭವಿಸಿದವರು ಅಲ್ಲಲ್ಲಿಗಿದ್ದರು. ನಾಗಮ್ಮನವರ ಸಚ್ಚಾರಿತ್ರದ ಸುದ್ದಿ ಸುತ್ತಲೂ ಹರಡಿತ್ತು. ಆದ್ದರಿಂದ ಗ್ರಾಮಾಂತರಗಳ ಜನರು ಈ ಶರಣಪ್ರಮುಖರನ್ನು ತಮ್ಮತಮ್ಮಲ್ಲಿಗೆ ಬರಮಾಡಿಕೊಂಡು ಉಪಚರಿಸಿ, ಗೌರವಿಸಿ, ಪೂಜಿಸಿ ಬೀಳ್ಕೊಡುತ್ತಿದ್ದರು. ಹಲವು ಕಡೆಗೆ ಚೆನ್ನಬಸವಣ್ಣನವರ ಅನುಭಾವದ ಪ್ರವಚನಗಳು ನಡೆದವು. ಅವರ ಲಿಂಗಾಂಗಸಾಮರಸ್ಯದ ಜ್ಞಾನದ ಪ್ರತಿಭೆಗೆ ಬೆರಗುಗೊಂಡವರು ಅವರ ಆಂದೋಲಿಕೋತ್ಸವವನ್ನು ನೆರವೇರಿಸುತ್ತಿದ್ದರು. ಈ ರೀತಿಯಾಗಿ ಆತ್ಮರಕ್ಷಣೆಯೊಡನೆ ಅನುಭಾವ ಗೋಷ್ಠಿಗಳಲ್ಲಿ ಆನಂದವನ್ನೂ ಲೋಕಾನುರಾಗಪ್ರಾಪ್ತಿಯನ್ನೂ ಅನುಭವಿಸುತ್ತ, ಕಡಕೋಳ ಗೊಡಚಿ ಸತ್ತಿಗೇರಿಗಳಲ್ಲಿ ಬೀಡಾರ ಮಾಡುತ್ತ ಸಾಗಿರುವಾಗ ತಮ್ಮ ಬೆನ್ನಮೇಲೆಯೇ ವಿರೋಧಿಸೇನೆಯು ಸಾಗಿಬಂದುದು ತಿಳಿಯಿತು. ಶರಣರ ಗಣಾಚಾರದಲದವರೂ ಯುದ್ಧಯೋಜನೆ ಮಾಡಿಕೊಂಡರು. ಮೊದಲೂರು ಎಂಬಲ್ಲಿ ಮೊದಲಕಾಳಗವಾಗಿ ಶರಣರಿಗೆ ಜಯಪಾಯಿತು. ಆದರೆ ಅವರ ದಲಡಲ್ಲಿಯ ಹಲವು ಭಟರು ಮರಣಹೊಂದಿದರು. ತಲ್ಲೂರು ಮುರಗೋಡ ಕಾಳಗಗಳಲ್ಲಿ ನಾಗಮ್ಮ–ಗಂಗಾಂಬೆಯರೂ ಶಸ್ತ್ರಧರಿಸಿ ಕದನದ ಕಣದಲ್ಲಿಯೇ–ಹಿಂಬಾಗದ ಕಾರ್ಯನಿರ್ವಹಿಸಿದರು. ನೊಂದವರನ್ನು ಸಂತೈಸುವ, ಗಾಯಾಳುಗಳನ್ನು ಉಪಚರಿಸುವ ಕಾರ್ಯವನ್ನು ಚೆನ್ನಬಸವಣ್ಣನವರು ಸ್ವತಃ ಕೈಕೊಂಡರು. ಈ ಎರಡೂ ಕಾಳಗಗಳಲ್ಲಿ ಶರಣರು ವಿರೋಧಿಗಳನ್ನು ಹಿಮ್ಮೆಟ್ಟಿಸಿ ರಕ್ಷಣೆ ಮಾಡಿಕೊಂಡರು. ಮುರಗೋಡ ರಣದಲ್ಲಿ ಗಣಾಚಾರಿಪಡೆಯಿಂದ ಹತನಾಗುತ್ತಿದ್ದ ಚಾವುಂಡರಾಯನು ನಾಗಮ್ಮನವರ ದಯೆಯಿಂದ ಬದುಕಿಕೊಂಡನು.

ಆ ದಿವಸ ಶರಣರಲ್ಲಿಯೂ ಸಾವುನೋವುಗಳು ಬಹಳ ಸಂಭವಿಸಿದ್ದರಿಂದ ಚೆನ್ನಬಸವಣ್ಣನವರ ಅಂತರಂಗಕ್ಕೆ ನೋವಾಗಿತ್ತು. ಆದರೇನು? ಅನ್ಯಉಪಾಯವೇ ಇರಲಿಲ್ಲ, ಶಿವನ ಸಂಕಲ್ಪವೆಂದು ಭಾವಿಸಿ ಮೃತರ ಸಮಾಧಿ ಮಾಡಿ ಶಿಬಿರಕ್ಕೆ ಬಂದು ವಿಶ್ರಾಂತಿ–ಪಡೆದರು. ಬೆಳಗಿನಲ್ಲಿ ಎಲ್ಲ ಪಾಳಯಗಳ ಶರಣದಳ ಬಂದು ಕೂಡಿ ಕೆಂಗೆರೆಯಲ್ಲಿ ಆಯುಧಗಳನ್ನು ತೊಳೆದು ಕ್ರಿಯಾಚಾರಸಂಪನ್ನರಾಗಿ ಪ್ರಸಾದ ಪಡೆದರು. ವೈರಿಗಳ ಜಟ

ಪಟಿಕೆಗಳತ್ತ ಗಮನವಿಟ್ಟು ಒಂದು ದಿನ ದಣಿವಾರಿಸಿಕೊಂಡು, ಬಳಿಕ ಮೂಗೆ ಬಸವದ ಕಡೆಗೆ ಸಾಗಿದರು.

ಚಾವುಂಡರಾಯನ ಅಭಿಮಾನಕ್ಕೆ ಪೆಟ್ಟಾಗಿತ್ತು. ತನ್ನ ದಂಡನ್ನು ಹಿಂದಿರುಗಿಸಿಕೊಂಡು ಬಂದು ಕೃಷ್ಣೆಯ ತೀರದಲ್ಲಿ ಬೀಡುಬಿಟ್ಟನು. ಕಲ್ಯಾಣದಿಂದ ಬರುವ ಹೆಚ್ಚಿನ ಸಹಾಯಕ್ಕಾಗಿ ಕಾದುಕುಳಿತನು.

ವೈರಿಗಳು ತಮ್ಮ ಬೆನ್ನು ಬಿಟ್ಟಿಲ್ಲ. ಹೆಚ್ಚಿನ ಸನ್ನಾಹದಿಂದ ಮತ್ತೆ ಬರಲಿದ್ದಾರೆ ಎಂಬದು ಶರಣದಳದ ನಾಯಕರಿಗೆ ಗೊತ್ತಾಯಿತು, ಆದರೆ ಅದಕ್ಕೆ ಕೆಲವು ದಿವಸ ಹಿಡಿಯಬಹುದು. ನಾಗಮ್ಮ ಚೆನ್ನಬಸವಣ್ಣ ಮಾಚಯ್ಯ ಕಿನ್ನರಯ್ಯ ಪ್ರಮುಖರು ಆಲೋಚನೆಗೊಳಗಾದರು. ಈಗ ಅವರಿಗೆ ಎರಡು ಮಾರ್ಗಗಳು ಮಾತ್ರ ಉಳಿದಿದ್ದವು.

೧) ಈ ಮಧ್ಯಂತರದ ಅವಕಾಶದಲ್ಲಿ ಬೇಗಬೇಗ ಪಯಣಿಸಿ ಸಹ್ಯಾದ್ರಿ ಕಳವುಗಳನ್ನು ಪ್ರವೇಶಿಸಿ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳುವದು. ಗ್ರಂಥ ಭಾಂಡಾರವು ಈ ಮೊದಲೇ ಅಲ್ಲಿಯ ಉಳಿವಿಗೆ ಸಾಗಿಸಲ್ಪಟ್ಟಿದ್ದಿತು.

೨) ಈ ಮಧ್ಯಂತರ ಅವಕಾಶದಲ್ಲಿ ಜನ-ಧನ-ಸಾಮಗ್ರಿಗಳಿಂದ ಸೇನಾಬಲವನ್ನು ಹೆಚ್ಚಿಸಿಕೊಂಡು, ಮೇಲೇರಿ ಬರುವ ಕಲಿಚೂರ್ಯದಳವನ್ನು ಸಂಪೂರ್ಣವಾಗಿ ಸೋಲಿಸಿ, ನಿಷ್ಕಂಟಕವಾಗಿ ಪ್ರಯಾಣ ಮಾಡುವದು.

ಈ ವಿಚಾರದಲ್ಲಿ ಶರಣಧರ್ಮದ ಉಳಿವುಅಳಿವುಗಳ ಸಮಸ್ಯೆಯು ಅಡಕವಾಗಿತ್ತು. ಚೆನ್ನಬಸವಣ್ಣನವರು ಹಿಂಸೆಗೆ ನೋಂದವರಾಗಿದ್ದರು. "ಹೇಗೂ ಗ್ರಂಥರಾಶಿ ಅರಣ್ಯಮಧ್ಯದ ಉಳಿವೆಯನ್ನು ಕಂಡಿದೆ. ತಾವು ಅಲ್ಲಿ ಹೋಗಿ ನೆಲಿಸಬೇಕು. ಗಹನಾರಣ್ಯದಲ್ಲಿ ವೈರಿಸೈನ್ಯ ಬರುವದು ಸುಲಭವಲ್ಲ." ಎಂದು ಅವರ ವಿಚಾರ! ನಾಗಲಾಂಬೆ ಇದನ್ನು ಒಪ್ಪಲಿಲ್ಲ. "ಇದರಿಂದ ತಾವು ಪಾರಾಗಿ ಉಳಿಯಬಹುದು. ಮಹಾಮಹಾ ಅನುಭಾವಿಗಳು ಅನುಭವದ ಒರೆಗೆ ಹಚ್ಚಿ ರೂಪಿಸಿದ-ಬಸವಣ್ಣನವರು ಜೀವನದುದ್ದಕ್ಕೂ ಅದರಂತೆ ಆಚರಿಸಿ ಸಿದ್ಧಾಂತಗೊಳಿಸಿದ- ಶರಣಧರ್ಮದ ಕೈಬಿಟ್ಟಂತಾಗುವದು. ವೈರಿಗಳು ಅರಣ್ಯದಲ್ಲಿ ಬರದಿದ್ದರೂ ನಾಡಿನಲ್ಲಿ ಅಲ್ಲಲ್ಲಿ ನೆಲಿಸಿರುವ ಈ ಮತದ ಅನುಯಾಯಿಗಳನ್ನು ನಾಶಮಾಡದೆ ಬಿಡುವದಿಲ್ಲ. ಹೀಗೆ ತನ್ನನ್ನು ತಾನು ಕಾಪಾಡಿಕೊಳ್ಳದ ಸಮಾಜಧರ್ಮದ ಮೇಲೆ ಸಾಮಾನ್ಯರ ಶ್ರದ್ಧೆ ಉಳಿಯುವದಿಲ್ಲ. ಆದ್ದರಿಂದ ಈ ಧರ್ಮದವರಲ್ಲಿ ವೀರವೃತ್ತಿಯನ್ನು ಉಂಟು ಮಾಡಬೇಕು. ಭೀರುತ್ವವನ್ನು ಅಳಿಯಬೇಕು. ತತ್ತ್ವದ ಘನತೆಯಲ್ಲಿ ಅಭಿಮಾನವಿಟ್ಟಿರುವ ಪ್ರಜೆಯಗಳ ಜೊತೆಗೂ ಮಂಡಳಾಧಿಪತಿಗಳೂ

ನಮಗೆ ನೆರವಾಗುವರು. ಬಿಜ್ಜಳನ ರಾಜ್ಯಾಪಹಾರಕ್ಕೆ ಖತಿಗೊಂಡ ಇವರೆಲ್ಲರೂ ದುರ್ಬಲವಾಗುತ್ತಿರುವ ಕಲಚೂರ್ಯ ಆಧಿಪತ್ಯಕ್ಕೆ ನಿಷ್ಠರಾಗಿರುವದಿಲ್ಲ, ಸ್ವತಂತ್ರರಾಗಲು ಯತ್ನಿಸುತ್ತಿದ್ದಾರೆ. ಮೇಲೇರಿ ಬರುವ ಅನಿಷ್ಟಶಕ್ತಿಗಳನ್ನು ನಿಗ್ರಹಿಸುವಾಗ ಹಿಂಸೆ ಅನಿವಾರ್ಯ! ಮತ್ತೊಮ್ಮೆ ಇತ್ತಬಾರದಂತೆ ವೈರಿ ಬಲವನ್ನು ನಾವು ಒಮ್ಮೆ ಸೋಲಿಸಿ ಅಟ್ಟಬೇಕು. ಆಗಮಗಳಲ್ಲಿ ಹೇಳಿದ ವೀರಶೈವದ ನಾಮವು ಅನ್ವರ್ಥವಾಗುವಂತೆ ಈ ಧರ್ಮವು ಆಚರಣೆಯಲ್ಲಿ ಉಳಿದು ಬೆಳೆದು ಬಾಳಬೇಕು.” ಇದು ತಾಯಿ ನಾಗಮ್ಮನವರ ಮತ! ಮಾಚಯ್ಯನ ವೀರವೃತ್ತಿಗೆ ಇದೇ ಸರಿಯೆನಿಸಿತು. ಕಿನ್ನರಯ್ಯ, ರೇಚಯ್ಯ, ವೃದ್ಧಕಕ್ಕಯ್ಯ, ಚಂದಯ್ಯ ಇವರೆಲ್ಲರು ಇದನ್ನೇ ಅನುಮೋದಿಸಿದರು. ಕೇವಲ ತತ್ತ್ವಪ್ರಧಾನಮೂರ್ತಿಯಾದರೂ ಚೆನ್ನಬಸವಣ್ಣನವರು ಸಮಾಜ ಧರ್ಮದ ನೀತಿಗೆ ತಲೆವಾಗಿ ಒಪ್ಪಿಕೊಂಡರು. ಅವರೆಲ್ಲರು ಆತ್ಮರಕ್ಷಣೆಗಿಂತ ಧರ್ಮರಕ್ಷಣೆಯನ್ನು ಮುಂದಿಟ್ಟುಕೊಂಡು ಹೋರಾಡುವ ನಿಶ್ಚಯಮಾಡಿದರು.

ಈ ಹೊತ್ತಿಗೆ ಮಲೆನಾಡಿನಲ್ಲಿ ಮುಂಗಾರು ರಭಸದಿಂದ ಸುರಿಯುತ್ತಿತ್ತು. ಆಗ ಅರಣ್ಯಮಧ್ಯದಲ್ಲಿ ವಸಾಹತು ಮಾಡುವದೂ ಸಾಧ್ಯವಿರಲಿಲ್ಲ ಹೇಗೂ ವಿರೋಧಿಗಳು ಹಿಂದೆ ಸರಿದದ್ದರಿಂದ ಮಳೆಗಾಲ ಮುಗಿಯುವವರೆಗೆ ಶರಣದಳವು ಬೆಳವಲದಂಚಿನ ನಾಡಿನಲ್ಲಿಯೇ ಉಳಿಯುವದಾಯಿತು. ತಮ್ಮ ಪಾಳಯವನ್ನು ಒಂದೇ ಕಡೆಯಲ್ಲಿ ದೊಡ್ಡದಾಗಿಡುವದರಿಂದ ಅನ್ನ ಸಾಮಗ್ರಿಗಳ ಪೂರೈಕೆ ಕಷ್ಟದಾಯಕವಾಗುವದೆಂದು, ಶರಣದಲನಾಯಕರು ನಾಲ್ಕುಗಾವುದದಂತರದ ವಲಯದಲ್ಲಿಯ ಹಲವು ಗ್ರಾಮಗಳಲ್ಲಿ ಪಾಳೆಯಗಳನ್ನಿಟ್ಟರು. ಪ್ರಮುಖರಿರುವಪಾಳೆಯವು ಕೇಂದ್ರಶಿಬಿರವಾಗಿತ್ತು. ಆಯಾಪಾಳೆಯಗಳಲ್ಲಿ ಶರಣರು ತಂಡತಂಡವಾಗಿ ಶಾಂತಿಯಿಂದ ಶಿವಾನುಭವ ವಿಚಾರದಲ್ಲಿ ತೊಡಗಿರುತ್ತಿದ್ದರು. ಚೆನ್ನಬಸವಣ್ಣನವರು ದಿನವೊಂದಕ್ಕೆ ಒಂದು ಶಿಬಿರದಲ್ಲಿ ನಿಂತು ಅನುಭಾವಗೋಷ್ಠಿಯನ್ನು ನಡೆಸುತ್ತಿದ್ದರು. ಅದರಲ್ಲಿ ಗ್ರಾಮಾಂತರ ಜನರು ಭಾಗವಹಿಸುತ್ತಿದ್ದರು. ಎಲ್ಲ ಪಾಳಯಗಳ ದಳನಾಯಕರು ಆಗಾಗ ಕೂಡಿ ಪರಿಸ್ಥಿತಿಯ ಪರಿಶೀಲನೆ ಮಾಡಿ ಮುಂದಿನ ಕಾರ್ಯಾಚರಣೆಯನ್ನು ನಿರ್ಧರಿಸುತ್ತಿದ್ದರು.

ಯುದ್ಧಯೋಜನೆ ಕಾದುಕೊಂಡಿರುವದು ಚೆನ್ನಬಸವಣ್ಣನವರ ಮನಸ್ಸನ್ನು ಕೊಂಚಕೊರೆಯುತ್ತಿತ್ತು. ‘ಅವ್ವೆಯ ಮತ್ತು ಮಾಚಯ್ಯನ ಅಭಿಪ್ರಾಯವನ್ನೂ ಅಲ್ಲಗಳೆಯುವಂತಿರಲಿಲ್ಲ. ಪ್ರಸಾರ ಬಲಗೊಂಡಂತೆ ಸತ್ಯ ನಿತ್ಯ ಸದ್ವರ್ತನೆಗೆ ಜನರು [illegible] ಅದಕ್ಕೆ ಅವಕಾಶ ಬೇಕು ಅದರ

ಆ ಪ್ರಯತ್ನವನ್ನೇ ನಿರ್ಮೂಲಗೊಳಿಸುವ ಈ ತಾತ್ಕಾಲಿಕ ಉಗ್ರದಾಳಿಗಳನು ನಿಗ್ರಹಿಸಲೇ ಬೇಕಲ್ಲ! ಇದೂ ಸಹಜವಾಗಿ ಬಂದೊದಗಿದ ಧರ್ಮಸಮ್ಮತ ಕರ್ತವ್ಯವೇ ಆಗಿದೆ, ಶಿವಕ್ರಿಯೆಯೇ ಆಗಿದೆ ಎಂಬುದಾಗಿ ಸಮಾಧಾನವನ್ನು ತಾಳುತ್ತಿದ್ದರು, ಮೊದಲನೆಯ ಪ್ರಹರದ ಹೊತ್ತು!. ಚೆನ್ನಬಸವಣ್ಣನವರು ಕರಣಹಸಿಗೆಯ ದ್ವಿತೀಯ ಪ್ರತಿಯನ್ನು ಪರಿಶೀಲಿಸುತ್ತ ಅದರ ಕೆಲಸಂದರ್ಭಗಳನ್ನು ಮಾಚಯ್ಯನೊಡನೆ ವಿವೇಚಿಸುತ್ತ ತಮ್ಮ ಚಿಕ್ಕ ಗೂಡಾರದಲ್ಲಿ ಕುಳಿತ್ತಿದ್ದರು, ಮುಂದುವರಿಯುತ್ತಿದ್ದ 'ಮಿಶ್ರಾರ್ಪಣ'ದ ಶುದ್ಧಪ್ರತಿಯನ್ನು ರೇಚಣ್ಣನು ಬರೆಯುತ್ತಿದ್ದನು, ಚೆನ್ನಬಸವಣ್ಣನವರ ಇನ್ನುಳಿದ ಹಿರಿಯ ಮಂತ್ರಗೋಪ್ಯ, ಪದಮಂತ್ರಗೋಪ್ಯ, ಶೊಂಭತ್ತಾರು ಸಕೀಲಗಳು ಈ ಕೃತಿಗಳ ಕಟ್ಟುಗಳು ಹತ್ತಿರದಲ್ಲಿದ್ದವು. ಅವುಗಳ ದ್ವಿತೀಯ ಪ್ರತಿಗಳನ್ನೂ ಬರೆಯಿಸಬೇಕಾಗಿರಬಹುದು. ಜಂಗಮರ ತಂಡವೊಂದು ದಿನ್ನೆಯಿಳಿದು ಬರುತ್ತಿದೆಯೆಂದು ಹೊರಗಿನವರು ಒಳಗೆ ಬಂದು ವರದಿ ಮಾಡಿದರು. ಕೂಡಲೆ ಮೂವರೂ ಹೊರಗೆ ಬಂದು ನೋಡಿದರು. ಸನ್ಮಾನಿಸಿ ದಾರಿ ತೋರಿ ಕರೆತರಲು ರೇಚಣ್ಣನನ್ನು ಮುಂದಕ್ಕೆ ಕಳುಹಿ ಚೆನ್ನಬಸವಣ್ಣ ಮಾಚಯ್ಯ ನೋಡುತ್ತ ನಿಂತರು. ಹರಹರಮಹಾದೇವ ಎನ್ನುತ್ತ ಆ ಗುಂಪು ಸನಿಹಕ್ಕೆ ಬಂದಿತು. ಅಲ್ಲಿಂದಲೇ ಕುದುರೆಯಿಂದಿಳಿದು ರುದ್ರಮುನಿದೇವರು ಮುಂದೆ ಬಂದರು ಅವರನ್ನು ಗುರ್ತಿಸಿದ ಚೆನ್ನಬಸವಣ್ಣನವರು ಕೈಮುಗಿದು ಮುಂದೆ ಹೋದರು ಅವರಿಬ್ಬರು ಪರಸ್ಪರವಂದಿಸಿದರು ಮಾಚಯ್ಯನೂ ಶರಣು ಶರಣು ಎಂದು ಬಾಗಿದನು, ಆದರದಿಂದ ಬರಮಾಡಿಕೊಂಡು ಗೂಡಾರದೊಳಗೆ ಕರದೊಯ್ದರು. ರುದ್ರಮುನಿಗಳ ಉತ್ಸಾಹದ ದೀರ್ಘವಾಣಿ ಹೊರಹೊಮ್ಮಿತು.

"ಚೆನ್ನಬಸವಣ್ಣನವರೆ, ನಿಮ್ಮ ಮೇಲಾಗುತ್ತಿರುವ ದಾಳಿಯನ್ನು ನೀವು ಅದನ್ನು ಧೈರ್ಯಶೌರ್ಯಗಳಿಂದ ಎದುರಿಸಿ ಹಿಮ್ಮೆಟ್ಟಿಸಿದುದನ್ನು ಬರುತ್ತಿರುವಾಗಲೇ ತಿಳಿದೆವು. ಮೊದಲು ನೀವು ಕಳುಹಿದ ಬಸವಣ್ಣನವರ ನಿರ್ಗಮನದ ವಾರ್ತೆ ತಲುಪಿತ್ತು. ಕಲ್ಯಾಣದಲ್ಲಿ ನಡೆದ ಅನಾಹುತಗಳನ್ನು ನೀವು ಅಲ್ಲಿಂದ ಹೊರಟುದನ್ನು ಬಸವಣ್ಣನವರೂ ನೀಲಮ್ಮನವರೂ ಬಯಲಾದುದನ್ನು ದೂರದಲ್ಲಿರುವ ನಾವು ಸ್ವಲ್ಪ ತಡವಾಗಿಯೇ ಕೇಳಿದೆವು. ಒಂದರ ಮೇಲೊಂದು ಆಘಾತವಾಗುವ ವಾರ್ತೆಗಳನ್ನು ಕೇಳಿ ಕಾತರಗೊಂಡು ಮನಸ್ಸಿನಿಂದ, ಮುಂದಿನ ಸಂಚಾರವನ್ನು ಮೊಟಕುಗೊಳಿಸಿ ಈ ಕಡೆಗೆ ಹೊರಟೆವು. ಪ್ರಯಾಣದಲ್ಲಿರುವ ನಿಮ್ಮ ಬಿಡದಿಗಳ ಸುಳಿವು ತಿಳಿಯುತ್ತ ಬರುತ್ತಿದ್ದಂತೆ ಹೋರಾಟದ ಸುದ್ದಿಗಳೂ ಕೇಳಿದವು. ಕಳವಳಿಸುವಂತಾಯಿತು. ಧರ್ಮ

ರಕ್ಷಣೆಗಾಗಿ ನೀವು ಹೋರಾಡುತ್ತಿರುವಾಗ ನಮ್ಮಿಂದಾಗುವ ಸೇವೆ ಸಲ್ಲಿಸಲು ಧಾವಿಸಿ ಬರುತ್ತಿದ್ದೆವು. ಸನಿಹಕ್ಕೆ ಬಂದಂತೆ ನಿಮ್ಮ ವಿಜಯದ ವರದಿಗಳೂ ಬಂದವು. ಹೊಸ ಸಮಾಜವ್ಯವಸ್ಥೆಯ ಉಳಿವಿಗೆ ಇದು ಶುಭಸೂಚನೆ! ನನ್ನ ಮನಸ್ಸಿಗೆ ನೆಮ್ಮದಿಯಾಯಿತು. ಹಿಂದಿನದು ಹಿಂದಾಯಿತು!"

"ಅದು ಸರಿ! ತಾವು ದಯಮಾಡಿಸಿದುದು ಬಹಳ ಸಂತೋಷ ಬುದ್ಧಿ. ಧರ್ಮವು ಧರ್ಮದಿಂದಲೇ ರಕ್ಷಿಸಲ್ಪಡಬೇಕು. ಮುಂದಿನ ದಾರಿಯನ್ನು ತಾವು ತೋರಿಸಬೇಕು."

"ದಾರಿ ಸ್ಪಷ್ಟವಿದೆ ಅದನ್ನೇ ನೀವು ಅನುಸರಿಸುತ್ತಿದ್ದೀರಿ. ಚೆನ್ನಬಸವಣ್ಣನವರೇ ಚಿಂತಿಸಬೇಕಾಗಿಲ್ಲ. ಸಾಮಾನ್ಯರೇ ಈ ಮಾಚಯ್ಯನವರು? ಇಂತಹವರಿದ್ದಾರಲ್ಲ! ಇವರು ಭಾವಬಲ್ಲಿದರಾದಂತೆ ಬಾಹುಬಲ್ಲಿದರೂ ಆಗಿದ್ದಾರೆ. ದ್ರೋಹಿಗಳ ಮೇಲೆ ಮಾಚಯ್ಯ ಖಡ್ಗವೆತ್ತಿದುದನ್ನು ಕಂಡವರು ವೀರಭದ್ರ ಹೀಗೆಯೇ ಇದ್ದಿರಬಹುದೆಂದು ತರ್ಕಿಸುತ್ತಾರಂತೆ!....ಓಹೋ ಇವು! ಈ ಕಟ್ಟುಗಳು. ನಿಮ್ಮ ಜ್ಞಾನರಾಶಿಯ ಹೊಸಮೂಟೆಗಳೇನು? ನಿಮ್ಮ ಆತ್ಮಸಾಹಿತ್ಯರಚನೆ ನಡೆದೇ ಇದೆ. ಎಲ್ಲ ಕಾಲವೂ ಒಂದೇ ಸಮ ನಿಮಗೆ! ಆ ಮೇಲೆ ಇವನ್ನು ನೋಡೋಣ! ಅವ್ವ ಎಲ್ಲಿ? ಅವರ ಹೆಸರು ಬಹಳವಾಗಿ ಬಹೂದೂರ ಕೇಳಿಸುತ್ತಿದೆ. ಪುಣ್ಯೋದರದಲ್ಲಿ ನಿಮ್ಮಂತಹರು ಹುಟ್ಟಿದ್ದು ಆಶ್ಚರ್ಯವಲ್ಲ!"

"ಆಗಲೆ ಅರ್ಚನೆ ತೀರಿಸಿಕೊಂಡು ಅಡುಗೆಯ ಗೂಡಾರಕ್ಕೆ ಹೋಗಿದ್ದಾರೆ. ಪ್ರಸಾದ ವ್ಯವಸ್ಥೆ ನೋಡಿಕೊಳ್ಳುತ್ತಿದ್ದಾರೆ" ರೇಚಣ್ಣ ಹೇಳಿದನು

"ಅಲ್ಲಿಯೇ ಹೋಗಿ ಕಾಣುವಾ ಬನ್ನಿ!"

ಎದ್ದು ನಡೆದರು ರುದ್ರಮುನಿದೇವರು! ಕೆಳಗೆ ಮಾವಿನ ತೋಪಿನಲ್ಲಿತ್ತು ಪ್ರಸಾದದ ಥಾವಣಿ. ಚೆನ್ನಬಸವಣ್ಣ ಮಾಚಯ್ಯ ಮುಂದಾಗಿ ನಡೆದರು. ಉತ್ಸಾಹ ಉಕ್ಕುವ ರುದ್ರಮುನಿಗಳು ಸುಮ್ಮನೆ ಸಾಗಿರಲಿಲ್ಲ: 'ನಾಗಮ್ಮನವರ ಜೀವಿತವೊಂದು ಮಹಾನದಿಯ ಪ್ರವಾಹ! ಅದು ಹರಿಯದ ಭೂಮಿಯಿಲ್ಲ. ತಣಿಸದ ಜನವಿಲ್ಲ. ಅದರ ಸಂಪರ್ಕದಿಂದ ಅಜ್ಞಾನದ ಮರಭೂಮಿ ಸುಜ್ಞಾನದ ಫಲ ಬೆಳೆಯಿತು. ಕೊಳಚೆ ಕಂಟಕಗಳು ಕೊಚ್ಚಿ ಹೋದವು. ಇನ್ನೂ ಸಾಗರ ಸೇರುವ ವರೆಗೆ ಈ ನದಿಯ ಉದಕದಿಂದ ಆತ್ಮತೃಪ್ತಿ ಪಡೆಯುವರದೆಷ್ಟು ಜನರೋ! ಇಂಥ ತಾಯಿಯ ಪುಣ್ಯೋದರದಿಂದ ನಿಮ್ಮಂತಹ ಜ್ಞಾನಿಗಳು ಹುಟ್ಟಿದ್ದು ಆಶ್ಚರ್ಯವಲ್ಲ.! ಕಲ್ಯಾಣದಿಂದ ಹೊರಬಿದ್ದ ಶರಣಶರಣೆಯರು ಬಸವಣ್ಣನವರನ್ನು ಬೆಳೆಸಿದ ನಿಮ್ಮನ್ನು

ಹೆತ್ತ ನಾಗಮ್ಮನವರ ಕೀರ್ತಿಯನ್ನು ಹಾಡುತ್ತಿದ್ದಾರೆ. ನಾವು ನಿನ್ನೆ ಮೊನ್ನೆ ಬರುವಾಗ ಈ ಭಾಗದ ಜನರು. ಧರ್ಮರಕ್ಷಣೆಗಾಗಿ ತಮ್ಮ ಪಾಲನ್ನು ಸಲ್ಲಿಸಲು ನಿಮ್ಮನ್ನು ಬರಮಾಡಿಕೊಳ್ಳುವ ಸಿದ್ಧತೆಯನ್ನು ಅಲ್ಲಲ್ಲಿ ನಡೆಸಿದ್ದುದು ತಿಳಿಯಿತು."

ಹೊರಗಿನ ದನಿ ಕೇಳಿ ಬಾಗಿಲಿಗೆ ಬಂದು ನಾಗಮ್ಮ ಸಂತಸದಿಂದ ಮುಹಿಗೆ ಪೈಯಿಕ್ಕಿ ವಂದಿಸಿದಳು. ನೆಲಮುಟ್ಟಿ ಬಾಗಿ ಆ ತಾಯಿಯ ವಂದನೆ ಸ್ವೀಕರಿಸಿದರು ರುದ್ರಮುನಿಗಳು.

"ಭಲಾ ತಾಯಿ ಚೆನ್ನಬಸವಣ್ಣನವರ ಷಟ್‌ಸ್ಥಲಧ್ವಜ ಬಿರುಗಾಳಿಗೆ ಶಿಲುಕಿತ್ತು. ನಿನ್ನ ಸುಭದ್ರ ಪವಿತ್ರ ಹಸ್ತವನ್ನು ಕೊಟ್ಟು ಕಾಪಾಡಿದೆ."

"ನಾನು ಅಬಲೆ ಸ್ವಾಮೀ! ಇವರೆಲ್ಲ ವೀರರು ಷಟ್‌ಸ್ಥಲ ಸಿದ್ಧಾಂತ ದಲ್ಲಿ ನಿಷ್ಠೆತಾಳಿದವರಿದ್ದಾರೆ. ಆ ಗಾಳಿ ಇನ್ನೂ ಊದುತ್ತಲಿದೆ.

"ಊದಲಿ, ಅದರ ಯೋಚನೆಯನ್ನೆಲ್ಲ ನಾನು ಹೇಳುತ್ತೇನೆ. ಇನ್ನು ಬೇಡಮ್ಮ"

"ಒಳಗೆ ಆ ಮಗ್ಗಲಿಗಿದ್ದ ಗಂಗಮ್ಮ ನೋಡಿ ಅವಸರದಿಂದ ಬಂದು ತನ್ನ ಗುರುಚರಣದ ಮೇಲೆ ತಲೆ ಇಟ್ಟಳು. ಕಣ್ಣೀರಿನ ಬಿಸಿತೊಟ್ಟುಗಳೆ ರಡು ಅವರ ಪಾದದ ಮೇಲೆ ಬಿದ್ದವು.

"ಏಳು ಮಗಳೆ, ಬಸವಣ್ಣನವರು ಬಯಲಾದುದಕ್ಕೆ ನೀನು ವ್ಯಥೆ ಗೊಂಡಿರುವದು ಸಹಜವಿದೆ. ನೀನವರ ಮೂರ್ತಿಯನ್ನು ನಿನ್ನಂತರಂಗದಲ್ಲಿ ನೋಡು, ಹೊರಗೆ ಹರಡಿದ ನಿನ್ನ ಪತಿಯ ಬೆಳಕ ನೋಡು ತಗ್ಗುದಿನ್ನೆ ಯಾಗಿ ಬೆಳೆಬಾರದಂತಿರುವ ವೀರಶೈವ ಹೊಲವನ್ನು ಬಸವಣ್ಣನವರು ಸಮ ನಾಗಿಸಿ ಮುಳ್ಳುಪೊದೆ, ಕಸಕಡ್ಡಿ, ಕಲ್ಲುಗುಡ್ಡೆಗಳನ್ನು ಕಿತ್ತು ತೆಗೆದು, ನಿತ್ಯ-ಸತ್ಯ–ಶಾಂತಿಯ ಫಲಕೊಡುವ ಸದ್ಭಕ್ತಿ, ಸದಾಚಾರ, ಸೇವೆ ಕಾಯಕ ದಾಸೋಹಗಳ ಬೆಳೆ ಬಿತ್ತಿದ್ದಾರೆ. ಆ ಬೆಳೆಯನ್ನು ನಾವೆಲ್ಲ ಕಾಪಾಡಿಕೊ ಳ್ಳಬೇಕು. ಅದರಲ್ಲಿ ನೀನೀಗಾಗಲೆ ಪಾಲುಗೊಂಡು ಈ ಹಿರಿಯಮ್ಮನೊಡನೆ ಮುಂದುವರಿದಿರುವೆ. ಅನುಭಾವಿಗಳ ಮಹತ್ವ ಆಪತ್ತಿನಲ್ಲಿ ಗೊತ್ತಾಗುವದು ಇತ್ತೀಚಿನ ನಿಮ್ಮ ಸಂಕಟಗಳಲ್ಲಿ ನೀವು ತಾಳಿದ ನಿಲುವಿನಿಂದ ನಿಮ್ಮೆಲ್ಲರ ಕೀರ್ತಿ ಹಬ್ಬತೊಡಗಿದೆ. ನೀವು ಕರ್ತವ್ಯನ ಸಮ್ಮುಖವಲ್ಲಿರುವೆ. ದುಃಖಿ ಸಬೇಡ ಗಂಗಮ್ಮ ತಾಯಿ!

"ಆಗಲಿ ಅಪ್ಪಾ. ನಿಮ್ಮ ಸೂಚನೆ ಶಿರಸಾಮಾನ್ಯ!"

ಮಾಚಯ್ಯ ಮುಂದೆ ಬಂದು ಹೇಳಿದನು:

"ದೇವರು ಪ್ರಯಾಣದ ಆಯಾಸವಾಗಿದೆ ತಮಗೆ! ತಮ್ಮ ಸ್ನಾನದ ವ್ಯವಸ್ಥೆಯಾಗುತ್ತಿದೆ. ಗಣಂಗಳನ್ನೆಲ್ಲ ಸ್ನಾನಕ್ಕೆ ಕಳಿಸಿದ್ದೇನೆ. ಅರ್ಚನೆ ಅರ್ಪಿತಗಳಾಗಿ ವಿಶ್ರಾಂತಿ ಪಡೆಯಬೇಕು. ಆ ಮೇಲೆ ಸ್ಯಾದ ಸಮಸ್ಯೆಯ ಪರಿಹಾರಕ್ಕೆ ಸಾವಧಾನವಾಗಿ ಆಲೋಚಿಸಬೇಕಾಗಿದೆ."

"ಸರಿ ಹಾಗೇ ಆಗಲಿ" ರುದ್ರಮುನಿಗಳು ಚೆನ್ನಬಸವಣ್ಣನವರೊಡನೆ ತಮ್ಮ ಸಾಮಾನುಗಳತ್ತ ನಡೆದರು. ಗಂಗಮ್ಮ ಪೂಜಾಸ್ಥಳದಲ್ಲಿ ಸಲಕರಣೆಗಳ ಜೋಡಣೆ ಮಾಡಿದಳು. ನಾಗಮ್ಮ ಪಾಕಶಾಲೆಯ ಕೆಲಸ ಜಾಗ್ರತಗೊಳಿಸಿದಳು.

* * * *

ಬೇಗಿನ ಹೊತ್ತಿನಲ್ಲಿ ಮುಂದಿನ ಗೂಡಾರದಲ್ಲಿ ಶರಣಪ್ರಮುಖರು ಸೇರಿದ್ದರು. ಪರಿಸ್ಥಿತಿಯ ಪರಿಶೀಲನೆ ನಡೆದಿತ್ತು. ಚೆನ್ನಬಸವಣ್ಣನವರು ಕೇಳಿದರು:

"ಯುದ್ಧವು ಧರ್ಮಸಮ್ಮತವೇ? ಮತಾಚರಣೆಗೆ ಇದು ಅನಿವಾರ್ಯವಾದ ವಿಧಾನವೇ?

"ಸಾಮಾನ್ಯವಾಗಿ ಸಮ್ಮತವಾದುದಲ್ಲ. ಆಗತ್ಯವಿಧಾನವೂ ಅಲ್ಲ. ಕೊನೆಯ ಪಕ್ಷಕ್ಕೆ ಧರ್ಮಸಮ್ಮತವಾಗುವದು. ಧರ್ಮವು ದೇಶ–ಕಾಲ-ಪರಿಸ್ಥಿತಿಯನ್ನನುಸರಿಸಿ ಬದಲಾಗುವದು. ಯಾಕೆ ಅಮ್ಮನವರೇ, ನೀವು ಹೇಳಿರಿ." ರುದ್ರಮುನಿಗಳು ನಾಗಮ್ಮನವರನ್ನು ಕೇಳಿದರು.

"ಹೌದು ದೇವರು, ಮತಾಚಾರಣೆಗೆ ಮೂರುವಿಧಾನಗಳು. ಅದರ ನೈತಿಕ, ತಾತ್ವಿಕ ವಿಧಾನಗಳು ನಿತ್ಯವಾದವುಗಳು, ಅವು ದರ್ಶನ ಸ್ವರೂಪ, ಬದಲಾಗಬಾರದವು. ಮೂರನೆಯದಾದ ಧಾರ್ಮಿಕವಿಧಾನವು ಕಾಲಪರಿಸ್ಥಿತಿಗೆ ಅನುಗುಣವಾಗಿ ಹೊಂದಿಕೊಳ್ಳುತ್ತ ಸಾಗಿ, ನೈತಿಕ ತಾತ್ವಿಕ ವಿಧಾನಗಳಿಗೆ ರಕ್ಷಣೆ ನೀಡಬೇಕು. ಇದನ್ನೇನು ಚೆನ್ನಬಸವಣ್ಣ ಅರಿಯರೇ? ಅವರು ಜೀವ ಹಿಂಸೆಗೆ ರೋಷಿಕೊಂಡಿದ್ದಾರೆ. ಆದರೆ ರಕ್ಷಣೆ ಈಗ ಅಗತ್ಯವಾಗಿದೆ."

"ಅದೇಮುಖ್ಯ! ವಿರೋಧಿಗಳು ಒಮ್ಮೆ ಈ ನಿಮ್ಮ ದಲವನ್ನು ಸದೆಬಡಿದು ಚದುರಿಸಿದರೆಂದರೆ ತೀರಿತು. ಕಟ್ಟೊಡೆಯಿತು. ದೇಶದಲ್ಲಿಯ ಲಿಂಗವಂತರ ಮಠಗಳು ಸಂಸ್ಥೆಗಳು ಅಲ್ಲಲ್ಲಿಯ ವಿರೋಧಿಗಳ ಉಪಟಳದಿಂದ ನಾಶವಾಗಿ ಬಿಡುವವು. ಬಸವಣ್ಣನವರು ಬಹ ಮುಖದಿಂದ ಸ್ಥಾಪಿಸಿದ

ಸಮಾನತೆ ಹಾಳಾಗಿ ಹೋಗುವದು. ಸಮಾಜ ಶೋಷಣೆ ಮತ್ತೆ ನಡೆಯು ವದು, ನಿರಂತರದ ಹಿಂಸೆಯನ್ನು ತಡೆಯುವದಕ್ಕಾಗಿ ಕೊನೆಗೆ ತಾತ್ಕಾಲಿಕ ಹಿಂಸೆ ಅಗತ್ಯ! ಅದು ಕ್ಷಮ್ಯ ಇದರ ಹೊರತು ಹಿಂಸೆ ಇಲ್ಲಿ ಯಾರಿಗೆ ಸೇರುತ್ತದೆ? ರಕ್ತರಂಜನೆ ಯಾರಿಗೆ ಬೇಕಾಗಿದೆ?"

ಚೆನ್ನಬಸವಣ್ಣನವರು ರುದ್ರಮುನಿಗಳ ತೀಕ್ಷ್ಣದೃಷ್ಟಿಯನ್ನು ಎದುರಿಸದಾದರು. 'ತತ್ತ್ವಸಿದ್ಧಾಂತ ಮುಖ್ಯ. ಅದರ ರಕ್ಷಣೆಗೆ ಯುದ್ಧ ಅನಿವಾರ್ಯವಾದರೆ ಆಗಲಿ' ಎನ್ನತೊಡಗಿತ್ತವರ ಮನಸ್ಸು.

"ನಮ್ಮ ಈ ಹೋರಾಟಕ್ಕೆ ಲೋಕಾಭಿಪ್ರಾಯ ಅನುಕೂಲವಾಗಿದಿಯೇ ಸ್ವಾಮೀ?" ತಮ್ಮವರ ಎದೆಗಟ್ಟಿಗೊಳಿಸುವದಕ್ಕೆ ಬೇಕಂತೆ ನಾಗಮ್ಮ ಕೇಳಿದಳವನ್ನು.

"ಓಹೋ ಅನುಕೂಲವಿಷ್ಟೇ ಅಲ್ಲ. ವಿಪುಲಸಹಾಯವೂ ಸಲ್ಲಲಿದೆ. ರಾಜ್ಯದಲ್ಲಿ ಬಸವಣ್ಣನವರ ಅರ್ಥಿಕ ಮತ್ತು ಸಾಮಾಜಿಕದ ನೂತನ ವ್ಯವಸ್ಥೆಗೆ ಮೆಚ್ಚಿದ ಮಾಂಡಲಿಕರು ಸಾಮಂತರು, ಬಿಜ್ಜಳನ ಆಡಳಿತಕ್ಕೆ ಅಂಕಿತರಾಗಿದ್ದರು. ಬಿಜ್ಜಳನು ಸ್ವಾರ್ಥಿಗಳ ಸಹಾಯಪಡೆದು ಚಾಲುಕ್ಯಸಿಂಹಾಸನವನ್ನು ಅಪಹರಿಸಿದ್ದರಿಂದ ಅಸಹ್ಯಪಟ್ಟ ಇವರೆಲ್ಲರು ಸ್ವತಂತ್ರರಾಗಲು ಯತ್ನಿಸುತ್ತಿದ್ದಾರೆ. ನೂತನ ಸಮಾಜಧರ್ಮವನ್ನು ರಕ್ಷಿಸುವದಕ್ಕಲ್ಲದೆ ಸೋವಿದೇವನ ಅಧಿಕಾರವನ್ನು ತಿರಸ್ಕರಿಸುವದಕ್ಕೂ ನಿಮಗೆ ಸಹಾಯಮಾಡಲು ನಿಶ್ಚಯಿಸಿದ್ದಾರೆ."

ನಾಗಮ್ಮ ಕೃತಜ್ಞತೆಯಿಂದ ನುಡಿದಳು:

"ಧರ್ಮರಕ್ಷಣೆಗೆ ಜನರಲ್ಲಿ ಉಂಟಾದ ಈ ಹುಮ್ಮಸು ತಮ್ಮ ಉಪದೇಶದ ಪರಿಣಾಮವೇ ಆಗಿದೆ. ಈ ಕಡೆಯ ದೊರೆದೊರೆಗಳು ತಮ್ಮ ಕಣಜಗಳನ್ನು ನಮ್ಮ ದಲಗಳಿಗೆ ಮುಕ್ತಗೊಳಿಸಿಟ್ಟಿದ್ದಾರೆ."

"ಅವರಿಗೂ ಈ ಕಾರ್ಯದ ಮಹತ್ವಗೊತ್ತಾಗಿದೆ ನಾಗಮ್ಮನವರೆ, ಇದಲ್ಲದೆ ಇವರಿಗೆ ಹಾಗೆ ಮಾಡಲು ಗೋವೆಯ ಕದಂಬರ ಜಯಕೇಶಿ ರಾಜನ ಆಜ್ಞೆಯಾಗಿದೆ. ಕೇಶಿರಾಜನ ತಂದೆ ಶಿವಚಿತ್ತರಾಜರು ಬಸವಣ್ಣನವರ ಭಕ್ತರು, ಮಿತ್ರರು ಆಗಿದ್ದರು. ಬಿಜ್ಜಳನ ರಾಜದ್ರೋಹವನ್ನು ಪ್ರತಿಭಟಿಸಿದವರಲ್ಲಿ ಅವರೇ ಮೊದಲಿಗರು."

"ನಮ್ಮ ಗ್ರಂಥಭಾಂಡಾರವು ಜಯಕೇಶಿರಾಜರ ರಕ್ಷಣೆಯಲ್ಲಿ ಸುರಕ್ಷಿತವಾಗಿದೆ." ಚೆನ್ನಬಸವಣ್ಣ ಎಂದರು.

"ಉಳಿವೆಯ ವಸತಿಹಾತಕ್ಕೆ, ಅವರೇ ಮುಖ್ಯಾಧಾರ" ಮಾಚಯ್ಯ ಹೇಳಿ

ದನು. ಉತ್ಸಾಹದಿಂದ ಮಾತು ಮುಂದುವರಿಸಿದರು ರುದ್ರಮುನಿದೇವರು, "ಕರವೀರಪುರ, ಕರ್ಹಾಡಗಳ ಶಿಲಾಹಾರರು ಕಲಚೂರ್ಯ ಪ್ರಭುತ್ವವನ್ನು ನಿರಾಕರಿಸಿ ಸ್ವಾತಂತ್ರ್ಯವನ್ನು ಘೋಷಿಸಿದ್ದಾರೆ. ಕರ್ಹಾಡದ ವಿಜಯಾರ್ಕನು ಚಾಲುಕ್ಯರಾಣಿಯಾಗಿದ್ದ ತನ್ನ ತಂಗಿಗೆ ಅಪಚಾರ ಮಾಡಿದ ಬಿಜ್ಜಳನ ಮೇಲೆ ಕ್ರೋಧಸಂತಪ್ತನಾಗಿದ್ದನು. ಅವನ ತರುಣಪುತ್ರ ರವಿದೇವನು ನಿಮ್ಮೊಡನೆ ಕೂಡಿ ಸೋವಿದೇವನ ಬಲಗೆಡಿಸಲು ಆತುರನಾಗಿದ್ದಾನೆ. ಸೋವಿದೇವನ ಸೇನೆ ಸೊನ್ನಲಿಗೆಯನ್ನು ದಾಟಿ ಬರುವದನ್ನು ಯಾವ ಸಾಮಂತರೂ ಸಹಿಸುವದಿಲ್ಲ. ಈ ಕ್ರಾಂತಿಯ ಪರಿಣಾಮವಾಗಿ ನೀವೀಗ ಇರುವ ಪ್ರದೇಶವು ಕಲಚೂರ್ಯ ರಾಜ್ಯದಲ್ಲಿಲ್ಲ. ನಿಮ್ಮ ಪ್ರಚಾರ ಸಂಚಾರಗಳಿಗೆ ಆತಂಕವಿಲ್ಲ."

"ಚಾವುಂಡರಾಯನು ಮತ್ತೆ ಬರುವದು ನಿಶ್ಚಿತವಿದೆ ಸ್ವಾಮೀ!" ಮಾಚಯ್ಯನೆಂದನು.

"ನಿಶ್ಚಿತವೇ ಇರಲಿ, ಬರಲಿ. ನೀವೂ ಯುದ್ಧಜೋಡಣೆಯನ್ನು ಕಾಯ್ದುಕೊಂಡಿರ್ರಿ. ಇದುವರೆಗೆ ಸಹಾಯ ಸಿಗುವಂತೆ ನಾನೂ ನೋಡಿಕೊಳ್ಳುತ್ತೇನೆ."

ಮುಂದೆ ಮಾತು ಚನ್ನಬಸವಣ್ಣನವರ ಹೊಸಸಾಹಿತ್ಯ ರಚನೆಯ ಕಡೆಗೆ ತಿರುಗಿದವು.

* * * *

ರುದ್ರಮುನಿದೇವರು ಶರಣದಲನಾಯಕರೊಡನೆ ನಾಲ್ಕುದಿನ ತಿರುಗಾಡಿ ಮುರಗಬಸವ, ಹುಣಶೀಕಟ್ಟಿ, ತುರುಮುರಿ, ಹಿಂಚಲಸಂಪಗಾಂವಿ; ಮುರರೇಭಾವಿ, ನಂದೀಹಳ್ಳಿ, ಚಿವುಟಗುಂಡಿ ಗ್ರಾಮಗಳಲ್ಲಿರುವ ಎಲ್ಲ ಪಾಳಯಗಳನ್ನು ನೋಡಿಕೊಂಡು ಬಂದರು. ಗಣಾಚಾರದ ಯೋಧರಲ್ಲಿ ಲೋಕಗೌರವ ಉಂಟಾದುದನ್ನು ಅವರಿಗೆ ತಿಳಿಸಿದರು, ಅವರಲ್ಲಿ ಧಾರ್ಮಿಕ ಕರ್ತವ್ಯದ ಅರಿವನ್ನು ಉಜ್ವಲಗೊಳಿಸಿದರು. ದಲನಾಯಕರ ಸಂದೇಹ-ಸಮಸ್ಯೆಗಳಿಗೆ ಪರಿಹಾರ ನೀಡಿದರು. ಹುಣಸೀಕಟ್ಟಿಯ ಹತ್ತಿರ ಅನುಕೂಲವಾಗಿ ಕಂಡ ಒಂದು ಸ್ಥಳವನ್ನು ತಮ್ಮ ಜಪಾನುಷ್ಠಾನಗಳಿಗಾಗಿ ಆಯ್ದುಕೊಂಡರು. ಅಲ್ಲಿ ಈಗಲೂ ಇರುವ ರುದ್ರಮುನಿಗವಿಯು ಇದಕ್ಕೆ ನಿದರ್ಶನವಾಗಿದೆ. ಮಲೆನಾಡಿನಲ್ಲಿ ಮಳೆಯಭರ ಕಡಿಮೆಯಾಗುವ ವರೆಗೆ ವಾಸಿಸಿದ ಶರಣರ ತಂಡಗಳಿಂದ ಬೆಳವಲದ ಈ ಭಾಗದಲ್ಲಿ ಸದ್ಭಾವ, ಸದಾಚಾರ, ಭಕ್ತಿ, ಸಮತೆಗಳು ಪ್ರಚುರಗೊಂಡವು. ಜನರು ಚೆನ್ನಬಸವಣ್ಣ ನಾಗಮ್ಮನವರನ್ನು ತಮ್ಮ ಗ್ರಾಮಗಳಿಗೆ ಬರಮಾಡಿಕೊಳ್ಳುವ ಬಿನ್ನಹಗಳು ಎಡೆಬಿಡದೆ ಬರುತ್ತಿದ್ದವು.

ಇವರ ಮುಖ್ಯ ಶಿಬಿರವಿರುವ ಸ್ಥಳದಲ್ಲಿ 'ನಾಗಲಾಪುರ' ವೆಂಬ ಗ್ರಾಮ ವಾಗಿ ಈ ತಾಯಿಮಕ್ಕಳ ಎರಡು ಗುಡಿಗಳಾಗಿವೆ.

ಚಾವುಂಡರಾಯನು ಮತ್ತೆ ದಂಡೆತ್ತಿ ಬಂದೇಬಂದನು. ಕಾದರವಳ್ಳಿಯ ಕಾಳಗದಲ್ಲಿ ಶರಣರ ಸಾಮಂತರ ಸಂಯುಕ್ತ ಸೇನೆಯಿಂದ ಪರಾಭವಗೊಂಡನು. ಕರ್ನಾಡದ ರವಿದೇವನ ಖಡ್ಗ ಪ್ರಹಾರದಿಂದ ಹತನಾದನು. ಅವನ ದಂಡು ಚದರಿಹೋಯಿತು. ಬಳಿಕ ಸೋವಿದೇವನು ಶರಣರ ಗೊಡವೆಗೆ ಬರುವ ದನ್ನು ಬಿಟ್ಟನು. ತನ್ನ ತಂದೆಯ ನಿಜವಾದ ಕೊಲೆಗಾರರು ಯಾರೆಂಬವೂ ಅಷ್ಟರಲ್ಲಿ ಅವನಿಗೆ ಗೊತ್ತಾಗಿತ್ತು.

* * * *

ಕುರುಗೋಡದಲ್ಲಿ ಶರಣರ ಮಹಾಪರ್ವ ನಡೆಯಿತು. ಅಲ್ಲಿ ಎಲ್ಲರೂ ಭವಿಷತ್ಕಾಲದ ತಮ್ಮತಮ್ಮ ನೆಲೆಗಳನ್ನು ನಿರ್ಧರಿಸಿಕೊಂಡರು. ರಕ್ಷಣೆಗೆ ಬಂದ ದೂರದ ರಾಜಸೈನಿಕರನ್ನು ಗಣಾಚಾರದಲದವರನ್ನು ಅಲ್ಲಿಂದಲೇ ಸನ್ಮಾನಿಸಿ ಬೀಳ್ಕೊಟ್ಟರು. ಸಮೀಪದ ಪ್ರದೇಶದ ದಲಗಳು ಮಾತ್ರ ಉಳಿವೆಯ ವರೆಗೆ ಉಳಿಯುವದು ಗೊತ್ತಾಯಿತು. ಮುಂದಿನ ಪ್ರಯಾಣದ ರಕ್ಷಣೆಯ ನಾಯಕತ್ವವನ್ನು ಕಿನ್ನರಿಬೊಮ್ಮಯ್ಯನಿಗೆ ವಹಿಸಿ, ಮಾಚಯ್ಯ ಸ್ವಸ್ಥಳವಾದ ಹಿಪ್ಪರಗಿಗೆ ಹೊರಟನು.

ಸಜ್ಜನ ಶಿವಾಚಾರಿಗಳೂ ಹಿರಿಯ ಅನುಭಾವಿಗಳೂ ಆದವರೊಬ್ಬರು (ಮುಗುಟಖಾನ) ಹುಬ್ಬಳ್ಳಿಯಲ್ಲಿದ್ದರು. ಅವರೂ ರುದ್ರಮುನಿದೇವರಿಂದ ಅನುಗ್ರಹಿತರಾದವರು, ಅವರ ಆಶ್ರಯದಲ್ಲಿ ಸಂಗಯ್ಯನ ಪಾಲನೆ ವಿದ್ಯಾಭ್ಯಾಸಗಳ ನಿರ್ವಹಣೆಗಾಗಿ ಗಂಗಮ್ಮನು ಇರಬೇಕೆಂದು ರುದ್ರಮುನಿಗಳು ಅಪ್ಪಣೆಮಾಡಿದರು. ಗುರುಗಳ ಆದೇಶದಂತೆ ನಾಗಮ್ಮನ ಸಲಹೆಯಂತೆ ಗಂಗಮ್ಮನು ಗ್ರಾಮದ ಹತ್ತಿರ ಮಲಪ್ರಭಾತೀರದಲ್ಲಿ ನೆಲಿಸಿ ನಿಂತಳು. ತತ್ತ್ವಜ್ಞಾನದಲ್ಲಿ ಆಸಕ್ತಿಯುಳ್ಳ ಶಿವಯೋಗಸಾಧಕರು ಉಳಿವಿಗೆ ಹೊರಟರು. ರುದ್ರಮುನಿದೇವರು ಉಳಿದ ಹಲಕೆಲವರು ಅಲ್ಲಿಂದಲೇ ಬೇರೆಬೇರೆ ಕಡೆಗೆ ಹರಿದು ಹೋಗಿ ಆತ್ಮೋದ್ಧಾರ ಭಕ್ತೋದ್ಧಾರಗಳನ್ನು ಕೈಕೊಂಡರು. ಕಾಲಾಂತರದಲ್ಲಿ ಲಿಂಗೈಕ್ಯಳಾದ ಗಂಗಮ್ಮನ ಸಮಾಧಿಯ ಮೇಲಿನ ಗಂಗಮ್ಮನ ಗುಡಿ (ಮುಗುಟಖಾನ) ಹುಬ್ಬಳ್ಳಿಯಲ್ಲಿದೆ. ಬಸವೇಶ-ನೀಲಾಂಬೆ-ಗಂಗಾಂಬೆಯರ ಸಮಾಧಿಗಳನ್ನು ಕೃಷ್ಣೆ–ಮಲಾಪಹಾರಿಣಿಯರು ಹೀಗೆ ಸೂತ್ರಬಂಧಗೊಳಿಸಿದುದು ಒಂದು ವಿಶೇಷ ! ಸಂಗಯ್ಯನ ಮುಂದಿನ ವಿಷಯ ಮಾತ್ರ ಇದುವರೆಗೆ ನಿಶ್ಚಿತವಾಗಿ ತಿಳಿದಿಲ್ಲ.

ಗೋವೆಯ ಜಯಕೇಶಿರಾಜನು ಬಂದು ಚೆನ್ನಬಸವಣ್ಣನವರನ್ನು ಕಂಡು ಅಭಿವಂದಿಸಿ, ಅವರ ಮುಂದಿನ ಪ್ರಯಾಣದ ವ್ಯವಸ್ಥೆಯನ್ನು ಪರಿಶೀಲಿಸಿದನು ತಕ್ಕಷ್ಟು ತನ್ನ ಭಟರನ್ನು ನೆರವಿಗೆ ನೇಮಿಸಿಕೊಟ್ಟು ಹೋದನು

ಶರಣರು ಮುಂದೆ ಎರಡು-ಗುಂಪುಗಳಾಗಿ ಉಳಿವಿಗೆ ಹೊರಟರು. ಒಂದು ಗುಂಪಿನವರು ಹಲಸಿಗೆ, ಕಕ್ಕೇರಿ ಲಿಂಗನಮಠ, ಜಂಗಮಹಟ್ಟಿ ಇವುಗಳಲ್ಲಿ ಬೀಡಾರಮಾಡುತ್ತ ಸಾಗಿದರು. ಅಲ್ಲೆಲ್ಲ ಅವರಿಗೆ ಕುರುಹುಗಳೂ ಹೆಸರುಗಳೂ ದೇವಸ್ಥಾನಗಳೂ ಉಂಟಾಗಿವೆ. ಶರಣಕಕ್ಕಯ್ಯನು ಕಕ್ಕೇರಿಯಲ್ಲಿ ಲಿಂಗೈಕ್ಯನಾದುದರಿಂದ ಅಲ್ಲಿ ಅವನ ಸಮಾಧಿಯಾಗಿದೆ. ಅಲ್ಲಿಂದ ಅರಣ್ಯಪ್ರವೇಶಮಾಡಿ ಜಗಳಬೆಟ್ಟ ಸಾಂಬ್ರಾಣಿಗಳ ಮೇಲಿಂದ ಎಲ್ಲಾಪುರಕ್ಕೆ ಬಂದರು. ದಾರಿಯಲ್ಲಿ ಇವರ ಕ್ರಾಂತಿಕಾರಕ ಆಚಾರವಿಚಾರಗಳನ್ನು ಸಹಿಸದ ಸನಾತನಿಗಳ ಹಾಗು ಕಾಡುಬೇಡ ಜನರ ಅನೇಕ ಉಪಟಳಗಳನ್ನು ಇವರು ಸಹಿಸಬೇಕಾಯಿತು.

ಎರಡನೆಯ ಗುಂಪಿನವರು ಕಿತ್ತೂರು, ಧಾರವಾಡ ಉಣಕಲ್ಲುಗಳ ಮೇಲಿಂದ ಮಲೆನಾಡು ಪ್ರವೇಶಿಸಿ ತುಂಬೂರಲ್ಲಿ ಕೆಲವು ದಿವಸ ತಂಗಿ ಮುಂದೆ ಸಾಗಿದ್ದಾರೆ. ಈ ಬಗೆಗಿನ ಸ್ಮಾರಕಗಳೂ ಗುಡಿಗಳೂ ತುಂಬೂರಲ್ಲಿ ಬಹಳವಾಗಿವೆ. ಇವರೂ ಎಲ್ಲಾಪುರಕ್ಕೆ ಬಂದು ಮೊದಲಿನ ಗುಂಪನ್ನು ಕೂಡಿದರು.

ಮುಂದೆ ಉನ್ನತಪರ್ವದ ಗಿಡಮರಗಳಿಂದ ಪರ್ವತಶ್ರೇಣಿಗಳಿಂದ ನದಿಯ ಕೊಳ್ಳಗಳಿಂದ ದುರ್ಗಮಯವಾದ ಮಾರ್ಗದಲ್ಲಿ ಬಹು ಪ್ರಯಾಸದಿಂದ ಪ್ರಯಾಣಮಾಡಿ ಉಳಿವೆಗೆ ಬಂದು ಸೇರಿದರು.

ಶರಣರ ಉಳಿವೆಯ ವಸಾಹತು ಯಾತ್ರೆಯು ಸತ್ಯಾಚಾರ ದೇಶದಲ್ಲೆಲ್ಲ ವ್ಯಾಪಕವಾಗಿ ಹರಡಿತ್ತು. ಯಾಕೆಂದರೆ ಶರಣರು ಕಲ್ಯಾಣದಿಂದ ಹೊರಟು ನೇರವಾಗಿ ಉಳಿವೆಗೆ ಹೋಗಿರಲಿಲ್ಲ. ವಿರೋಧಿಗಳೊಡನೆ ಹೋರಾಡುತ್ತ ಆಶ್ರಯ ಅನುಕೂಲಗಳು ದೊರೆವತ್ತ ಸಾಗಬೇಕಾಗಿತ್ತು. ಜನರು ಗೌರವಿಸಿ ಕರೆವತ್ತ ಒಲಿದು ಹೋಗಬೇಕಾಗಿತ್ತು. ಧರ್ಮಪ್ರಚಾರವನ್ನು ನಡೆಯಿಸಬೇಕಾಗಿತ್ತು. ಈ ರೀತಿ ಸುತ್ತುದಾರಿಗಳಿಂದೆ, ಅಗಲವಾದ ಪ್ರವಾಹದಂತೆ ಪ್ರಯಾಣಿಸಿ ಉಳಿವೆಯನ್ನು ಸೇರಿದರು. ಗ್ರಂಥರಾಶಿ ಮೊದಲೇ ಅಲ್ಲಿ ಬಂದಿದ್ದಿತು. ಆದರಿಂದ ಶರಣರು ಬರುವ ಸುದ್ದಿ ಮಲೆನಾಡ ಗುಹೆಗಂಹರಗಳಲ್ಲಿ ರಮ್ಯಪ್ರದೇಶಗಳಲ್ಲಿ ಸಾಧಕರಾಗಿ ವಾಸಿಸುತ್ತಿರುವ ಸಂಯಮಿ-ಸನ್ಯಾಸಿಗಳಿಗೆ ತಿಳಿದಿತ್ತು. ಅವರು ಸುಜ್ಞಾನಿ-ದಾರ್ಶನಿಕ ಮಹಾಶಿವಯೋಗಿ ಚೆನ್ನಬಸವಣ್ಣನವರ ದಾರಿಯನ್ನು ನೋಡುತ್ತಿದ್ದರು. ಜಿಜ್ಞಾಸುಗಳು ಮೊದಲೇ ಉಳಿವಿಗೆ ಬಂದು ಕಾದಿದ್ದರು.

## ೯ 'ಬಯಲು ಬಯಲೇ ಆಯಿತ್ತು, ಬೆಳಗು ಉಳಿಯಿತ್ತು.

ಶರಣರು ಉಳಿವೆಯ ತಲುಪಿದೊಡನೆ ಗಹನಾರಣ್ಯ ಮಧ್ಯದ ಗುಡ್ಡಗಾಡು ಪ್ರದೇಶವನ್ನು ನೂರಾರು ಜನರು ವಾಸಿಸುವುದಕ್ಕೆ ಅನುಕೂಲವಾಗುವಂತೆ ಸರಿಪಡಿಸಿಕೊಳ್ಳಬೇಕಾಯಿತು. ಹಾಗೆಯೇ ತತ್ವಜಿಜ್ಞಾಸುಗಳ ತೃಪ್ತಿಗಾಗಿ ಅನುಭವಗೋಷ್ಠಿಯನ್ನು ಏರ್ಪಡಿಸಬೇಕಾಯಿತು. ಚೆನ್ನಬಸವಣ್ಣನವರನ್ನು ಕಾಣಬರುತ್ತಿದ್ದ ಬಹು ಜನ ಯೋಗ ಸಾಧಕರ ಸಲುವಾಗಿ ದಾಸೋಹ ನಿಲಯವನ್ನು ವ್ಯವಸ್ಥೆಗೊಳಿಸಬೇಕಾಯಿತು. ಇಂಥವುಗಳನ್ನೇ ಮಾಡಿಮಾಡಿ ವೈಯುಂಡ ನಾಗಮ್ಮನವರ ಹಿರಿತನದಲ್ಲಿ ಈ ಎಲ್ಲ ಕಾರ್ಯಗಳು ನಡೆದವು. ಕಿನ್ನರಿ ಬೊಮ್ಮಯ್ಯನು ಗುಡ್ಡರ ಪಡೆಯನ್ನು ಬರಮಾಡಿಕೊಂಡು ಆಶ್ರಮ ರಚಿಸಲು ಕಾರ್ಯಕೈಕೊಂಡನು. ಈ ಕೆಲಸಕ್ಕೆ ಸೂಪ ಕಂಪಣದ ಪರಿಯಪ್ಪ ಬೊಪ್ಪರಸು ಎಂಬ ಗತಿಸಿದ ವೀರಬಂಧುಗಳ ವೃದ್ಧರಾಣಿಯರಿಬ್ಬರು ಧನ ಸಹಾಯ ಮಾಡಿದರು. ಅವರ ಗತ್ತುಪುತ್ರನಾದ ರಾಜಪ್ಪನು ಸ್ವತಃ ನಿಂತು ಜನರ ಕೂಡಿಸಿ ಭದ್ರವಾದ ವಿಶಾಲವಾದ ಮಹಮನೆಯನ್ನು ಗುಹೆಯ ಹಿಮ್ಮಗ್ಗಲು ವಿರಚಿಸಿದನು. ಈ ಮೊದಲು ಗೋವೆಯ ಜಯಕೇಶರಾಜನು ಶರಣರ ನೆರವಿಗೆ ಕಳುಹಿದ ದಳದ ನಾಯಕನು ರಾಜಪ್ಪನೇ ಆಗಿದ್ದನು. ಕಿನ್ನರಿ ಬೊಮ್ಮಯ್ಯನು ಕೆಲವಂತರದಲ್ಲಿ ಹರಿಯುತ್ತಿದ್ದ ನದಿಯ ಪ್ರವಾಹವನ್ನು ಬೆಟ್ಟಕಡಿದು ತಿರುವಿಕೊಂಡು ಆಶ್ರಮದ ಗುಹೆಯ ಮುಂದೆ ಬಿದ್ದು ಹರಿಯುವಂತೆ ಮಾಡಿದನು. ಈ ಪ್ರವಾಹವು ಮಹಮನೆಗೆ ಜಲಸೌಕರ್ಯ ನೀಡಿತಲ್ಲದೆ, ಜಲಕೋಟೆಯಾಗಿ ಭದ್ರತೆಯನ್ನು ನೀಡಿತು. ಇದು ಈಗ ಕಿನ್ನರಿ ಬೊಮ್ಮಯ್ಯನ ಹೊಳೆಯೆಂದು ಹೆಸರಾಗಿದೆ.

ಯೋಗ ಸಾಧಕರು ಚೆನ್ನಬಸವಣ್ಣನವರನ್ನು ಮೊದಲು ಮುತ್ತಿದರು. ಅವರು ಯೋಗದ ವಿವಿಧ ಪ್ರಕಾರಗಳನ್ನು ಅನುಸರಿಸುವವರಾಗಿದ್ದರು. ಅವರೆಲ್ಲರಿಗೆ ಶಿವಯೋಗದ ಮಹತಿಯನ್ನು ಚೆನ್ನಬಸವಣ್ಣನವರು ಮನಗಾಣಿಸಬೇಕಾಗಿತ್ತು.

ಶಿವಯೋಗವನ್ನು ಅವಲಂಬಿಸಿದರೆ ಮಂತ್ರ, ಹಠ ಮೊದಲಾದ ಯೋಗಗಳ ಮೇಲೆ ಕೈಯ್ಯೂರಬೇಕಾಗಿಲ್ಲ. ಅವುಗಳನ್ನು ಅಂಶಃ ಒಳಗೊಂಡ ಶಿವಯೋಗವು ಭಕ್ತಿಯ ಆಧಾರದಲ್ಲಿ ಸುಲಭವಾಗಿ ಸಹಜವಾಗಿ ಶಿವಸಾಮರಸ್ಯಕ್ಕೆ

ಅವಕಾಶವನ್ನು ಒದಗಿಸುತ್ತದೆ. ರಾಜಯೋಗದ ದೃಷ್ಟಿಯೋಗಸಿದ್ಧಿಯನ್ನು ಶಿವಯೋಗಿಯು ಕರದಿಷ್ಟಲಿಂಗದಲ್ಲಿ ಸಾಧಿಸಿ ಮುಂದುವರಿಯುವನು. ಗುರುಕೃಪೆಯಿಂದ ಶರಣನ ಶಿರದ ಅರಮನೆಯ ಪರಬ್ರಹ್ಮವೇ ಲಿಂಗಮೂರ್ತಿಯಾಗಿ, ಅವನ ಕರದ ಅರಮನೆಗೆ ಬಿಜಯಂಗೈದಿರ್ದುದು. ಆ ಇಷ್ಟದಲ್ಲಿ ದೃಷ್ಟಿ ನೆಟ್ಟು ಪ್ರಾಣವಾಯುವನ್ನು ನಿಗ್ರಹಿಸಿ ಮನದ ಚಂಚಲತೆ ಅಡಗಿ ಪ್ರಾಣಲಿಂಗಿಯಾಗಿ ಭಾವೈಕ್ಯವನ್ನು ಪಡೆಯುವನು. ಲಿಂಗಾಂಗ ಸಾಮರಸ್ಯ ಸುಖವನ್ನು ಅನುಭವಿಸುವನು. ಈ ಸಿದ್ಧಿಗೆ ಷಟ್‌ಸ್ಥಲ ಸಿದ್ಧಾಂತವು ಪ್ರಮಾಣಯುತ ಮಾರ್ಗವಾಗಿದೆ. ಶಿವಭಕ್ತಿ, ಶಿವಮಂತ್ರ, ಶಿವಧ್ಯಾನ, ಶಿವಜ್ಞಾನಗಳನ್ನೊಳಗೊಂಡ ಶಿವಪೂಜೆ (ಶಿವೋಪಾಸನೆ) ಸಾಧನೆಯಾಗಿದೆ. ಇವರಲ್ಲಿ ಪ್ರಾಣಲಿಂಗಿಯ ಘಟ್ಟವು ಬಹಳ ಮಹತ್ವದ್ದು. ಅಲ್ಲಿಗೆ ಬಂದವರು ಲಿಂಗಾಂಗ ಸಂಯೋಗ ಹೊಂದುವದು ಕಠಿಣವಲ್ಲ. ಶಿವಭಕ್ತಿ ಶಿವಕ್ರಿಯೆ ಶಿವಜ್ಞಾನಗಳು ಸಮನ್ವಯಗೊಂಡೇ ಅಂತರಂಗವು ಪಾರದರ್ಶಕವಾಗಿ ಒಳಗೆ ಹೊರಗೆ ಎಂಬುದಿಲ್ಲವಾಗುವದು. ಈ ಸಾಮರಸ್ಯದಿಂದ ಲಿಂಗ-ಅಂಗ, ಪೂಜ್ಯ-ಪೂಜಕ, ಇತ್ಯಾದಿ ದ್ವಂದ್ವಗಳು ಅಳಿದು ಒಂದಾಗಿ ಅದುವೆ ಪರಶಿವನಾಗುವದು. ಇದು ಶಿವಶರಣರ ಶಿವಯೋಗದ ರಹಸ್ಯ! ಇದನ್ನು ಶಾಸ್ತ್ರಾಗಮಂಗಳಿಂದ ಅನುಭಾವಗಳ ವಚನಗಳಿಂದ ಆತ್ಮ-ದೇಹ-ಪ್ರಾಣ ಮನಸ್ಸುಗಳ ಪರಸ್ಪರ ಸಂಬಂಧದ ವಿವರಣೆಯಿಂದ ಅವರಿಗೆ ಒಪ್ಪಿಗೆಯಾಗುವಂತೆ ಚೆನ್ನಬಸವಣ್ಣನವರು ತಿಳಿಸುತ್ತಿದ್ದರು. ಸಾಧಕರು ತಮತಮಗೆ ಬೇಕೆನಿಸಿದಂತೆ, ಚೆನ್ನಬಸವಣ್ಣನವರ ವಚನಗಳ ಸಂಗ್ರಹದ ಮತ್ತು ಇತರ ಕೃತಿಗಳ ಪ್ರತಿಗಳನ್ನು ಮಾಡಿಕೊಂಡರು. ಈ ಕಾರ್ಯಗಳಿಂದ ಅನುಭವ ಗೋಷ್ಠಿ ಮುಂದುವರಿಯಿತು. ನೂತನ ಮಹಮನೆಯಲ್ಲಿ ಗ್ರಂಥ ಭಂಡಾರ ತೆರೆಯಿತು. ಪ್ರವಚನ-ಪರ್ವ ಮಾಲಿಕಾದ ಜ್ಞಾನಸತ್ರಗಳು ಎಡೆಬಿಡದೆ ನಡೆದವು. ಈ ಬಗೆಯಾಗಿ ಸುರಮ್ಯವಾದ ನಿಸರ್ಗದ ಮಡಿಲಲ್ಲಿ ಶಿವಲೀಲೆ ವಿಜೃಂಭಿಸಿದಂತೆ ಶಿವಾಚಾರ ಶಿವಜ್ಞಾನ ಶಿವಯೋಗಗಳ ಕಳೆ ಹಲವು ಮುಖದಿಂದ ಹೊಂಗೊಳಿಸಿತು. ಕಲ್ಯಾಣದ ಬೆಳಕು ಉಳಿವೆಯ ದರಿಕಂದರಗಳನ್ನು ಬೆಳಗಿತು.

ಈ ಪುನರ್ಘಟನೆಯ ವಾರ್ತೆಯೂ ನಾಡಿನಲ್ಲೆಲ್ಲ ಹರಡಿತು. ಕಲ್ಯಾಣದಲ್ಲಿ ಕಟ್ಟೆಯೊಡೆದ ಅಧ್ಯಾತ್ಮಿಕ ಸರೋವರದ ಅನುಭಾವ ಜಲವು ಎರಡು ಹೊನಲಾಗಿ ಶ್ರೀಶೈಲಕ್ಕೂ ಉಳಿವೆಗೂ ಹರಿದಿದ್ದಿತು. ಇವೆರಡರ ನಡುವಿನ ಪ್ರದೇಶದಲ್ಲಿ ಧರ್ಮಜಾಗ್ರತಿ ಉಂಟಾಗಿತ್ತು. ಪೂರ್ವದಕ್ಷಿಣಗಳಲ್ಲಿಯ ಬಹುದೂರದ ಶ್ರದ್ಧೆಯುಳ್ಳ ಸಜ್ಜನ ಮುಕ್ಷುಯರು ಅನುಭಾವಿಗಳು ಸಾಧಕರು ಬಂದು

ಉಳಿವೆಯಲ್ಲಿ ನೆರೆದವರು, ಇವರಿಗಾಗಿ ಜ್ಞಾನದಾಸೋಹ ನಡೆಸುವ ಭಾರ ವನ್ನು ಜ್ಞಾನನಿಧಿ ಚೆನ್ನಬಸವಣ್ಣನವರು ತಮ್ಮ ಆರೋಗ್ಯವನ್ನು ಲಕ್ಷಿಸದೆ ನಿರ್ವಹಿಸಿದರು. ಹಾಗೆಯೇ ಅತಿಥಿಗಳ ಸತ್ಕಾರದ, ಅನ್ನದಾಸೋಹದ, ಪ್ರಸಾ ದನಿಲಿಯುವನ್ನು ಆ ಕಾಡುಬೀಡಿನಲ್ಲಿ ಕಷ್ಟಬಟ್ಟು ಅಕ್ಕನಾಗಮ್ಮ ನಡಿಸಬೇಕಾಯಿ ತು ಅದಕ್ಕವರು ಅಳುಕದೆ ಟೊಂಕಕಟ್ಟಿದರು. ಈ ಶಿವಯೋಗಿಣಿಯು ಶರೀರ ಅಲಿಸಿಕೆಯನ್ನೇ ಅರಿಯದು! ಕಿನ್ನರಯ್ಯ, ಚಂದಯ್ಯ ಇವರನ್ನು ಬಿಟ್ಟರೆ ಕಲ್ಯಾಣದಲ್ಲಿದ್ದಂತಹ ಹಿರಿಯ ಪರಿಣತ ಶರಣರ ನೆರವು ಆ ತಾಯಿಮಕ್ಕ ಳಿಗಿರಲಿಲ್ಲ. ಹೆಚ್ಚಾಗಿ ಇದ್ದವರು ಹೊಸ ಅನುಭಾವಿಗಳು, ಭಕ್ತಿಭರದ ದರ್ಶ ನೋತ್ಸುಕರು ತೆರವಿಲ್ಲದೆ ಬಂದು ಇದ್ದುಹೋಗುತ್ತಿದ್ದರು.

ಉಳಿವೆಗೆ ಬಂದು ಎರಡು ವರ್ಷವಾಗಲಿತ್ತು. ಕಲ್ಯಾಣಬಿಟ್ಟಂದಿನಿಂದ ಕಿನ್ನರಯ್ಯನ ದೇಹ ನುಗ್ಗುನುಗ್ಗಾಗುತ್ತಲಿತ್ತು. ಧ್ಯೇಯದಲ್ಲಿ ತಲ್ಲೀನನಾದ ಅವನಿಗೆ ದೇಹದ ಪರವೆ ಇರಲಿಲ್ಲ. ಬೆಟ್ಟದ–ನಾಡಿನಲ್ಲಿ ವಸಹಾತು ಸ್ಥಾಪಿ ಸುವಲ್ಲಿ ಬೆಟ್ಟಕಡಿದು ಹೊಳೆಯ ಮುಖ ತಿರುಗಿಸುವಲ್ಲಿ ಅವನು ತೀರ ಹಣ್ಣಾಗಿದ್ದನು. ಹತ್ತುದಿನಗಳಿಂದ ಆತನು ಜ್ವರದಿಂದ ಪೀಡಿತನಾಗಿದ್ದನು. ಹಿರಿಯತಾಯಿ ನಾಗಲಾಂಬೆ ಆರೈಕೆ ಮಾಡುತ್ತಿದ್ದಳು. ಎರಡುಮೂರುದಿನ ಗಳಿಂದ ಆಹಾರವನ್ನು ತೊರೆದು ಚೆನ್ನಬಸವಣ್ಣನವರ ಪಾದತೀರ್ಥವನ್ನೇ ಸೇವಿಸಿದನು. ಮೂರನೆಯ ದಿನ ಸಾಯಂಕಾಲ ನಾಗಮ್ಮ ಕುಳಿತು–ದಿನದಂತೆ ಶಿವಾರ್ಚನೆ ಮಾಡಿಸಿ, ಸ್ವಲ್ಪ ಅಕ್ಕಿಯ ಗಂಜಿಯನ್ನು ಒತ್ತಾಯದಿಂದ ಪ್ರಸಾದವಾಗಿ ಕುಡಿಸಿದಳು. ಸ್ವಲ್ಪ ಚೇತರಿಸಿದಂತೆ ಕಂಡನು. ಇನ್ನು ಗುಣ ವಾಗುವದೆಂದು ಆಶೆತಾಳಿ ನಾಗಮ್ಮ, ಅಲ್ಲಿ ಮಲಗುವ ಜತೆಯ ಜಂಗಮ ರಿಗೆ ಜಾಗ್ರತೆ-ಹೇಳಿ ಬಂದಳು. ಆದರೆ ಹತ್ತಿರದವರು ನಿದ್ರೆಹೋದಬಳಿಕ ಕಿನ್ನರಯ್ಯನು ತನ್ನ ವ್ರತದ ನಿತ್ಯಕ್ರಮದಂತೆ ಒಳಗಿನ ಪ್ರಜ್ಞೆಗೆ ಒಳಗಾಗಿ ರೋಗಬಾಧೆಯ ಅರಿವಿಲ್ಲದೆ ಕಿನ್ನರಿ ತಕ್ಕೊಂಡು ಹೊರಬಂದು ಹಾಡುತ್ತ ಹೆಜ್ಜೆ ಹಾಕಿದನು:

'ಶಿವಶಕ್ತಿಯಿಂದೆ ಬೇರೆ ಸಂಪದವಿಲ್ಲ.
 ಶಿವತತ್ತ್ವದಿಂದೆ ಬೇರೆ ಅಮೃತವಿಲ್ಲ.
ಶ್ರೀ ಮಹಾಲಿಂಗ ತ್ರಿಪುರಾಂತಕೇಶ್ವರನ
 ಒಡಲಿನಲ್ಲಲ್ಲದೆ ಬೇರೆ ಎಡೆಯಿಲ್ಲ.'

ಮಧ್ಯರಾತ್ರಿ! ಕಿನ್ನರಯ್ಯನ ದನಿ ಕೇಳಿ ನಾಗಮ್ಮ ಚನ್ನಬಸವೇಶ್ವರರು ತಮ್ಮ ಗವಿಗಳಿಂದ ಗಡಬಡಿಸಿ ಎದ್ದು ಬಂದರು. ಅಷ್ಟರಲ್ಲಿ ಆತನು ನಾಗ

ಮ್ಮನ ಗವಿಯವರೆಂದೆ ತಲೆವಾಗಿ ಮುಂದೆ ಬಂದು ಚೆನ್ನಬಸವಣ್ಣನವರ ಗವಿಯ ಮೆಟ್ಟಿಲಿಗೆ ತಲೆಯಿಟ್ಟು ವಂದಿಸಿ ಹೊರಳಿ ಬಿದ್ದನು. ಕೈತಪ್ಪಿದ ಕಿನ್ನರಿ ಟಿಬ್ ಥಪ್ ಠಪ್ ಎಂದು ಸಪ್ಪಳ ಮಾಡುತ್ತ ಕಂದರಕ್ಕೆ ಉರುಳಿತು ವೃದ್ಧ ತಾಯಿ, ಬಸವಲು ಶರೀರದ ಮಗ ಇಬ್ಬರೂ ಕಷ್ಟಪಟ್ಟು ಕಿನ್ನರಯ್ಯನನ್ನು ಮೇಲಕ್ಕೆಬ್ಬಿಸುತ್ತಿರುವಾಗ ಅವನ ಜತೆಗೆ ಮಲಗಿದ್ದವರು ಓಡಿಬಂದು ಹಿಡಿದೆಬ್ಬಿಸಿದರು. ತಂಗಾಳಿಯಲ್ಲಿಯೂ ಅವನ ಮೈ ಕೆಂಡವಾಗಿತ್ತು ಮೆಲ್ಲನೆ ಕರೆದೊಯ್ದು ಮಲಗಿಸಿದರು. ಬಾಯ್ತುಂಬ್ ಏನೂ ಇಲ್ಲಿಲ್ಲ ತುಟಿಗಳು ಓಂನಮಃಶಿವಾಯದಿಂದ ಚಲಿಸುತ್ತಿದ್ದವು. ಎಲ್ಲರೂ ಹತ್ತಿರ ಬಂದರು. ನಾಗಮ್ಮ ಆತನ ತಲೆಯನ್ನು ತೊಡೆಯಮೇಲೆ ತಗೆದುಕೊಂಡು ಕಷಾಯ ಕುಡಿಸಲು ಯತ್ನಿಸಿದಳು, ಅದು ಫಲಿಸಲಿಲ್ಲ. ಮಂತ್ರೋದಕದ ತೊಟ್ಟುಗಳನ್ನೇ ತುಟಿಯ ಮೇಲೆ ಬಿಡುತ್ತಿದ್ದರು. ಚೆನ್ನಬಸವಣ್ಣ ಧ್ಯಾನಮಗ್ನರಾಗಿದ್ದರು. ಉಳಿದವರು ಮಂತ್ರಪಠಿಸುತ್ತಿದ್ದರು. ಬೆಳಗಿಗೆ ಒಂದು ಗಳಿಗೆಯಿರುವಾಗ ಕಿನ್ನರಿಬೊಮ್ಮಯ್ಯನ ಪ್ರಾಣ ವಾಯು ಮಹಾಲಿಂಗದಲ್ಲಿ ಲೀನವಾಯಿತು ಅತ್ತ ಹೊಳೆ ಕಂಡ ಕಿನ್ನರಿ ಆತ್ಮನಾದದೊಡನೆ ಮಹಾನಾದವಲ್ಲಿ ಬೆರೆಯಲು ಸಾಗರದತ್ತ ವೇಗವಾಗಿ ಸಾಗಿತ್ತು.

ಕಿನ್ನರಿಬೊಮ್ಮಯ್ಯನ ಅಗಲಿಕೆ ಎಲ್ಲರಿಗೂ ದುಃಖವನ್ನುಂಟು ಮಾಡಿತು, ಗುಡ್ಡರೆಲ್ಲ ಕೂಡಿ ಗೋಳಾಡಿದರು. ಚೆನ್ನಬಸವಣ್ಣನವರು ಮೂಕನಂತಾಗಿದ್ದರು. ಅವರ ಮಾನಸಿಕ ಸಮತೆ ಅಲುಗಿತ್ತು. ಗಂಭೀರಳಾಗಿರುತ್ತಿದ್ದ ನಾಗಲಾಂಬೆಯೂ 'ನಮ್ಮ ಕೈಬಿಟ್ಟು ನಡೆದೆಯಾ ಕಿನ್ನರಿ ತಂದೆ' ಎಂದು ಗೋಳಿಟ್ಟಳು ಕಿನ್ನರಯ್ಯನ ಶ್ರದ್ಧೆ, ಸೇವೆ, ವೀರ ಧೀರಗಳ ನೆನಹು ಆ ಕಣ್ಣೀರಿಗೆ ಕಾರಣವಾಗಿತ್ತು.

ಉಳಿವೆಯಲ್ಲಿಯ ಅವನ ಸಮಾಧಿಯ ಕಲ್ಲಿನ ಮೇಲೆ 'ಕಿನ್ನರಯ್ಯ' ಎಂಬ ಅಕ್ಷರಗಳಿರುವುದನ್ನು ನೋಡಬಹುದು.

* *

ಉಳಿವೆಯ ವಸಾಹತಿನ, ಅಲ್ಲಿಯ ಮಹಮನೆ-ಅನುಭವಮಂಟಪಗಳ ಕಾರ್ಯಕಲಾಪಗಳ ಉತ್ಸಾಹ ಬಹುದಿವಸ ಉಳಿಯಲಿಲ್ಲ. ಕಲ್ಯಾಣದಲ್ಲಿ ಒಡೆದ ಪ್ರಣತಿಯನ್ನು ಉಳಿವೆಯಲ್ಲಿ ತಂದು ಹೊಂದಿಸಿ ಮತ್ತೆ ಹೊತ್ತಿಸಿದರೂ ಬೆಸುಗೆ ಬಹುದಿವಸ ಬಾಳಲಿಲ್ಲ. ಆದರೆ ಅದು ಆರುವ ಮೊದಲು ಅದರಿಂದ ಅನೇಕ ದೀಪಗಳು ಹೊತ್ತಿಕೊಂಡವು. ಚೆನ್ನಬಸವಣ್ಣನವರ ಅಸಂಖ್ಯಾತ ವಚ

ಗಳ ಪ್ರತಿಗಳೂ ಸಿದ್ಧವಾಗಿದ್ದವು. ನಾಗಮ್ಮನ ಅನುಭವಪೂರ್ಣ ವಾಣಿಯಿಂದ ಸಂಗ್ರಹಿಸಿದ, 'ಮಿಶ್ರಾರ್ಪಣ' ಕೃತಿಯೂ ಪೂರ್ಣವಾಗಿತ್ತು, ಮಲೆನಾಡ ಹವೆಗೆ ಚೆನ್ನಬಸವಣ್ಣನವರ ಆರೋಗ್ಯ ಕೆಟ್ಟಿತ್ತು. ಅವಿಶ್ರಾಂತ ಶ್ರಮದಿಂದಲೂ ಅವರ ಶರೀರ ಕ್ಷೀಣಿಸಿತ್ತು. ಕಿನರಯ್ಯ ಬಯಲಾದ ಮೇಲೆ ವಸಾಹಾತಿನ ಬೆನ್ನು ಮೂಳೆ ಮುರಿದಂತಾಗಿತ್ತು. ಘೋರಾರಣ್ಯದ ಮಧ್ಯದಲ್ಲಿ ವರ್ಷದಲ್ಲಿ ನಾಲ್ಕು ತಿಂಗಳು ರಭಸದಿಂದ ಸುರಿಯುವ ಮಳೆಯಲ್ಲಿ ಇರಲಾಗದೆ ಹಲವರು ಚದರಿ ಹೋಗುವ ಇಚ್ಛೆ ತಾಳಿದ್ದರು, ಇನ್ನು ತಮ್ಮ ಮಣಿಹ ಮುಗಿದಂತೆಯೇ ಎಂದು ಭಾವಿಸಿದ ಚೆನ್ನಬಸವಣ್ಣನವರು ಹೆಚ್ಚು ಹೆಚ್ಚಾಗಿ ಅಂತರ್ಮುಖಿ ಯಾದರು.

'ನೋಟವುಳ್ಳನ್ನಕ್ಕರ ಕೂಟವುಂಟು; ಭಾವವುಳ್ಳನ್ನಕ್ಕರ ಭ್ರಮೆಯುಂಟು
ನೋಟಗೆಟ್ಟು ಭಾವನಷ್ಟವಾಗಿ, ಮನ ಲಯವಾದ ಬಳಿಕ
ಕೂಡಲ ಚೆನ್ನಸಂಗಮದೇವಾ ನಿಮ್ಮ ಶರಣ
ಒಳಗೂ ನೋಡ. ಹೊರಗೂ ನೋಡ.

ಎಂಬ ತಮ್ಮ ಅನುಭವದ ಬೋಧೆಯ ನಿಲವಿನಲ್ಲಿ ತಾವಿದ್ದರು.

ಒಂದು ದಿನ ತಮ್ಮ ನಿರಂಜನ ಪೀಠದ ಅಧಿಕಾರವನ್ನು ನಿರ್ವಹಿಸು ವಂತೆ ಸೊನ್ನಲಿಗೆಯ ಸಿದ್ಧರಾಮ ಶಿವಯೋಗಿಗಳಿಗೆ ನಿರೂಪಣ ಪತ್ರ ಬರೆದು ಅದನ್ನೂ ಟೊಪ್ಪಿ ಕಮಂಡಲು ಯೋಗದಂಡಗಳನ್ನೂ ಕರಣ ಹಸಿಗೆ ಮೊದ ಲಾದ ಗ್ರಂಥಗಳ ಪ್ರತಿಗಳನ್ನೂ ರೇಚಣ್ಣನ ಅಂಕಿತದಲ್ಲಿ ಸಮರ್ಥ ನಿಷ್ಠ ಜಂಗಮ ಮೂರ್ತಿಗಳೊಡನೆ ಸೊನ್ನಲಾಪುರಕ್ಕೆ ಕಳುಹಿದರು. ಇಲ್ಲಿಗೆ ಚೆನ್ನಬ ಸವಣ್ಣನವರ ಜೀವನದ ಧ್ಯೇಯವು ಪೂರೈಸಿದಂತಾಗಿ ಅವರು ಯೋಗ ನಿರತರಾ ದರು.

ಅರಿಯಲಿಲ್ಲದ ಅರಿವು. ಮರೆಯಲಿಲ್ಲದ ಮರವು
ನೋಡಲಿಲ್ಲದ ಬೆರಗು ನಿಂದುದು
ಕೂಡಲ ಚೆನ್ನ ಸಂಗಯ್ಯನಲ್ಲಿ ಲಿಂಗೈಕ್ಯವು.

ಹಾಗು:—

ಆನೆಂಬುವದಿಲ್ಲ. ನೀನೆಂಬುದಿಲ್ಲ. ಸ್ವಯವೆಂಬುದಿಲ್ಲ. ಪರವೆಂಬುದಿಲ್ಲ.
ಅರಿವೆಂಬುದಿಲ್ಲ. ಮರನೆಂಬುದಿಲ್ಲ. ಒಳಗೆಂಬುದಿಲ್ಲ. ಹೊರಗೆಂಬುದಿಲ್ಲ.
ಕೂಡಲ ಚೆನ್ನಸಂಗಯ್ಯನೆಂಬ ಶಬ್ದ ಮುನ್ನಿಲ್ಲ.

ಎಂಬುತಿತ್ತು, ಅವರ ಯೋಗದ ಇರುವು

ಕಿನ್ನರಿ ಬೊಮ್ಮಯ್ಯ ಬಯಲಾದ ಸುದ್ದಿಯನ್ನು ಒಂದೆರಡು ತಿಂಗ ಳಾದ ಮೇಲೆ ಸಂಚಾರದಲ್ಲಿದ್ದ ರುದ್ರಮುನಿದೇವರು ಕೇಳಿ ಉಳಿವೆಗೆ

ಬಂದರು. ಪರಿಸ್ಥಿತಿಯನ್ನು ವಿಶ್ಲೇಷಿಸಿ ನೋಡಿ ಚೆನ್ನಬಸವಣ್ಣನವರ ಅವತಾರ ಸಮಾಪ್ತಿ ದೂರವಿಲ್ಲೆಂದು ತಿಳಿದರು. ಧ್ಯಾನಯೋಗವ ಹೊರತು ಚೆನ್ನಬಸವಣ್ಣನವರ ಎಲ್ಲ ಇಂದ್ರಿಯಗಳು ಕ್ರಿಯೆಗಳು ನಿಂತು ಹೋಗಿದ್ದವು. ಆತ್ಮ ಜ್ಯೋತಿಯು ಪರಂಜ್ಯೋತಿಯಲ್ಲಿ ಬೆರೆವ ಭರವು ಅವರ ಮುಖದಲ್ಲಿ ಪ್ರಕಾಶಮಾನವಾಗಿ ಸ್ಫುರಿಸುತ್ತಿತ್ತು ಮಹದ ಬೆಳಗೇ ದರ್ಶನ ಕೊಟ್ಟಂತಾಗಿ ರುದ್ರಮುನಿಗಳು ಪರವಶತೆಯಿಂದ ಪ್ಮೈಯಿಕ್ಕಿ ವಂದಿಸಿದರು. ನಾಗಮ್ಮ ಸಾಷ್ಟಾಂಗವಾಗಿ ಎರಗಿದಳು. ಶರಣರು ಓಲೈಸಿದರು. ಭಕ್ತರು ಭಜಿಸಿದರು

ಊಹಿಸಲರಿಯೆ, ಉತ್ತರವನರಿಯೆ.
ದೇವನರಿಯೆ, ದೇಹಿಕನರಿಯೆ.
ನಾನೆನ್ನಲರಿಯೆ, ನೀನೆನ್ನಲರಿಯೆ
ಕೂಡಲ ಚೆನ್ನಸಂಗಮದೇವಾ ಎನ್ನಲರಿಯೆ

ಎಂದು ಹಾಡಿದರು.

ನಾಗಮ್ಮನ ಹೃದಯದಲ್ಲಿ ದುಗುಡುವೊಂದು ತಲೆದೋರಿತು. ಚೆನ್ನಬಸವಣ್ಣ ತನ್ನ ಮಗನೆಂಬ ಮಾಯಾಮೋಹದ ವ್ಯಥೆಯೇನೂ ಅದಲ್ಲ. ಅದು ಲವಲೇಶವೂ ಇರಲಿಲ್ಲ. ಆತನು ಗುರು ತಂದೆ ಎಂದೇ ಭಾವಿಸಿದ್ದಳು ಷಟ್‌ಸ್ಥಲ ಚಕ್ರವರ್ತಿ, ಶಿವಯೋಗಿ ಎಂದು ಪೂಜ್ಯನನ್ನಾಗಿ ಕಾಣುತ್ತಿದ್ದಳು. ಬಸವ, ಚನ್ನಬಸವ. ಪ್ರಭುದೇವರಾದಿ ಶರಣರ ಕರುಣೆಯ ಕೂಸು ತಾನು ಎಂದೇ ಎಂದೆಂದಿಗೂ ಭಾವಿಸಿದ್ದಳು. ಸಂಗನ ಬಸವಣ್ಣನ ಪ್ರಸಾದದಿಂದ ಎನ್ನಭವದ ಬಳ್ಳಿಯ ಬೇರು ಹರಿಯಿತ್ತು ಚೆನ್ನಬಸವಣ್ಣನು ಕರುಣಿಸಿದ್ದರಿಂದ ಎನ್ನ ಮನದ ಕಪಟ ಹಿಂಗಿತ್ತು, ಪ್ರಭುದೇವರ ಶ್ರೀ ಶರಣ ಸೇವೆಯಿಂದ ಎನ್ನ ಅಂತರಂಗದ ಸಂದು ಸಂಶಯ ತೊಲಗಿತ್ತು. ಎಂದು ಯಾವಾಗಲೂ ಹಾಡುತ್ತಿದ್ದಳು ಹಾಗಾದರೆ ಈಗಾದ ದುಗುಡದ ಕಾರಣವೇನು ? ಬಸವಣ್ಣ ಸಂಸ್ಥಾಪಿಸಿದ ಶರಣಧರ್ಮ... ಸರ್ವರೂ ಸಮಾನತೆಯಿಂದ ಆತ್ಮೋದ್ಧಾರ ಸಾಧಿಸುವ ಧರ್ಮ ಸುಸ್ಥಿರವಾಗಿ ನೆಲೆಗೊಳ್ಳುವದು ತನ್ನ ಜೀವನದ ಗುರಿ! ಅದಾಗದ ಮುನ್ನವೇ ನ್ನಬಸವಣ್ಣ ತೊಲಗುವನೆಂಬುದು ಕಾರಣವಾಗಿತ್ತು.

ಚೆನ್ನಬಸವಣ್ಣನವರ ಮುಖದ ಆ ಬೆಳಗು ಮಾಬೆಳಗ ಕೂಡಿತು: ಅಲಗೆಂತ್ತಿದ್ದ ತುಟಿ ಅಚಲವಾದವು. ಲಿಂಗಸಜ್ಜೆಯ ಹಿಡಿದಕೈಯು ಹಿಡಿದಂತಿತ್ತು. ಶಿರವು ಬಲಕ್ಕೆ ಒಲಿಯಿತು: ಶರೀರ ಉರುಳುವದರಲ್ಲಿತ್ತು. ರುದ್ರಮುನಿಗಳು ಎದ್ದು ಹಿಡಿದರು.

ತನು ಬಯಲು ನಿರವಯದೊಳಡಗಿತ್ತು.
ಮನ ಬಯಲು ನಿರವಯದೊಳಡಗಿತ್ತು.
ಭಾವ ಬಯಲು ನಿರವಯದೊಳಡಗಿತ್ತು.
ಕೂಡಲ ಚೆನ್ನಸಂಗಯ್ಯನೆಂಬ ನುಡಿಯಡಗಿತ್ತು.
ಬಯಲು ಬಯಲು ಬೆರಸಿ ಬಯಲೆ ಆಯಿತ್ತು

ಶರಣರು ಶಿವಶಿವಾ ಎಂದು ಉಸಿರುಗೆರೆದರು. ಭಕ್ತರೆಲ್ಲ ಗೋಗರೆ ದರು. ಗಿಡಮರಗಳೆಲ್ಲ ಸ್ತಬ್ಧವಾಗಿ ಧ್ಯಾನದಲ್ಲಿ ಮುಳುಗಿದಂತಿದ್ದವು.

ರುದ್ರಮುನಿಗಳ ನೇತೃತ್ವದಲ್ಲಿ ಚೆನ್ನಬಸವಣ್ಣನವರ ಪಾರ್ಥಿವ ಶರೀರಕ್ಕೆ ಸುವಿಧಾನಪೂರ್ವಕವಾಗಿ ಸಮಾಧಿಯಾಯಿತು. (ಕ್ರಿ. ಶ. ಸುಮಾರು ೧೧೭೦ಕ್ಕೆ)

(ಅಲ್ಲಿ ಅವರ ದೇವಸ್ಥಾನ ಉಂಟಾಗಿ ಪ್ರತಿವರ್ಷ ಮಹೋತ್ಸವ ನಡೆಯುತ್ತಿದೆ. )

ಮುಂದೆ ಮೂರುದಿವಸಕ್ಕೆ ಸೊನ್ನಲಾಪುರದಿಂದ ಮರಳಿ ಬಂದ ರೇಚಣ್ಣ ಮೊದಲಾದವರು ತಮ್ಮ ಮಹಾಶಿವಯೋಗಿಯನ್ನು ಕಾಣದೆ ಮರುಗಿದರು.

* * * *

ಅನುಭವಮಂಟಪದ ಸಂಸ್ಥೆ ಮತ್ತೆ ಒಡೆಯಿತು. ಅನುಭಾವಿಗಳು ಅಲ್ಲಿ ನಿಲ್ಲದಾದರು. ಅವರು ಗ್ರಂಥಭಾಂಡಾರವನ್ನು ಹಂಚಿಕೊಂಡು ತಮ್ಮಿಷ್ಟ ಬಂದ ಕಡೆಗೆ ಸಾಗಿಹೋದರು. ನಾಡಿನ ಬೇರೆ ಬೇರೆ ಭಾಗಗಳಲ್ಲಿ ತಮ್ಮ ಮಠಗಳನ್ನು ಸ್ಥಾಪಿಸಿ ಲಿಂಗವಂತ ಧರ್ಮ ಪ್ರಸಾರವನ್ನು ಕೈಕೊಂಡರು. ರುದ್ರಮುನಿದೇವರು ದೇಶದಲ್ಲಿ ಅಲ್ಲಲ್ಲಿ ಸ್ಥಾಪಿಸಿದ ತಮ್ಮ ಮಠಗಳನ್ನು ನಿರೀಕ್ಷಿಸುತ್ತ ಶ್ರೀಶೈಲದ ಕಡೆಗೆ ಹೋದರು. ಕೊನೆಗೆ ಉಳಿದ ಪ್ರಮುಖರೆಂದರೆ ನಾಗಮ್ಮ, ನುಲಿಯ ಚಂದಯ್ಯ ಇವರು. ಇನ್ನುಳಿದವರೆಂದರೆ ರೇಚಣ್ಣ ಮೊದಲಾದ ಕೆಲವರು.

ನಾಗಮ್ಮನವರಿಗೆ ಲೌಕಿಕದ ಯಾವ ಸೂತ್ರ, ತಂತ್ರಗಳೂ ಉಳಿಯ ಲಿಲ್ಲ. ಸರ್ವ ಸ್ವತಂತ್ರಳು. ಜೀವನ ಹೇಗೆಂಬ ವಿಚಾರವಂತೂ ಮೊದಲೇ ಇಲ್ಲ. ಶರಣಧರ್ಮದ ಮೇಲಿನಶ್ರದ್ಧೆ, ನಿಷ್ಠೆ ಇತ್ಯಾದಿ ಭಕ್ತಿ ಪಾರಮ್ಯ ದಲ್ಲಿ ತಲ್ಲೀನಳಾಗಿದ್ದಳು. ಧ್ಯೇಯವೆಂದರೆ ಒಂದೇ. ಧರ್ಮೋದ್ಧಾರ! ಸ್ಮರಣವೆಂದರೆ ಪ್ರಭುದೇವ ಬಸವಣ್ಣ, ಚೆನ್ನಬಸವಣ್ಣ ಇರವ ಅತ್ಯಂತಿಕ ಅಮೃತವಾಣಿ! ಇದ್ದಷ್ಟು ದಿವಸ ಅದನ್ನೇ ಮಾಡುವದು. ಅದನ್ನೇ ಹೇಳುವದು ಕೇಳುವದು. ಈ ಧ್ಯೇಯಕ್ಕಾಗಿಯೇ ಇನ್ನು ಬಾಳುವದು. ಹೀಗೆ ಧ್ಯೇಯ

ದಲ್ಲಿಯೇ ಮನಸ್ಸು ಎರಕವಾಯಿತು. ಈ ನಿರ್ಧಾರದಿಂದ ಮತ್ತೆ ಮೈದೋ ರಿತು ಉತ್ಸಾಹ ಅವಳಲ್ಲಿ!

ಶಿವಯೋಗಿಣಿ ನಾಗಮ್ಮನೂ ಚೆಂದಯ್ಯನೂ ಹತ್ತೆಂಟು ಜನ ಅನು ಯಾಯಿಗಳೊಡನೆ ಉಳಿವೆಯನ್ನು ಬಿಟ್ಟು ಮುಂಡಗೋಡ. ಶಿರಸಿ, ಸಾಗರಗಳ ಮೇಲಿಂದ ತುಂಗಾ-ಭದ್ರಾ ನದಿಗಳ ಪ್ರದೇಶಕ್ಕೆ ಬಂದರು, "ಎಣ್ಣೆ ಹೊಳೆ" ಎಂಬಲ್ಲಿ ಆಶ್ರಮ ಮಾಡಿಕೊಂಡು ನಿಂತರು. ನಾಗಮ್ಮ ಮಹಾಧೀರೆ. ದೊಡ್ಡ ಶರಣೆ ಪರಮಾನುಭಾವಿ. ಬಹು ಮುಖದ ವ್ಯಕ್ತಿತ್ವವುಳ್ಳ ನಾಗಲಾಂಬೆಯ ಸ್ಥಾನವು ಉಚ್ಚ ಮಹಿಳೆಯರಲ್ಲಿ ಅತ್ಯುಚ್ಚವಾಗಿದೆ. ಬಸವಯುಗದ ಕ್ರಾಂತಿಯಲ್ಲಿ ನಾಗಮ್ಮನ ಪಾತ್ರಅತಿ ಮಹತ್ವದ್ದು. ಬಸವಣ್ಣನವರ ಘನವಾದ ವ್ಯಕ್ತಿತ್ವ ವನ್ನು ರೂಪಿಸಿದ ಶ್ರೆಯಸ್ಸಿನಲ್ಲಿ ಬಹು ಭಾಗ ನಾಗಮ್ಮನದು. ಆಕೆಯೇ ಬಸ ವಣ್ಣನವರ ಸರ್ವ ಕಾರ್ಯತತ್ಪರತೆಯ ಹಿನ್ನೆಲೆಯ ಶಕ್ತಿಯಾಗಿದ್ದಳು ಜ್ಞಾನ ಭಾನು ಚೆನ್ನಬಸವಣ್ಣನವರನ್ನು ಹೆತ್ತಪುಣ್ಯೋದರ ಆಕೆಯದು. ಬಸವಣ್ಣ ಚೆನ್ನಬಸವಣ್ಣ ಈ ಎರಡು ಸರ್ವ ಮಾನ್ಯ ಮಹಾ ಮಾನವ ರತ್ನಗಳನ್ನು ಧರೆಗಿತ್ತ ಸ್ತ್ರೀ ರತ್ನ ಅಕ್ಕ ನಾಗಮ್ಮ. *

ಯೋಗ ಸಾಧಕರು ಎಣ್ಣೆಹೊಳೆ ಆಶ್ರಮಕ್ಕೆ, ಈ ಶಿವಯೋಗಿಣಿಯ ದರ್ಶನಕ್ಕೆ ಬಂದು ಜ್ಞಾನಸಂಪಾದನೆ ಮಾಡುತ್ತಿದ್ದರು. ಹೊಸದಾಗಿ ಸ್ಥಾಪ ನೆಗೊಂಡ ಮಠಮಾನ್ಯಗಳವರು ಸಲಹೆ ಸೂಚನೆ ಪಡೆಯುತ್ತಿದ್ದರು. ಹೀಗೆ ಎಂಟು ಹತ್ತುವರ್ಷವಾದರೂ ಆ ಶಿವಯೋಗಿಣಿ ಅಲ್ಲಿ ಬದುಕಿದ್ದಳು. ಸಮಾಜಧರ್ಮದ ಕ್ರಾಂತಿದೂತರು ಜನಿಸುವ ಮೊದಲೇ ಜನಿಸಿ, ಕ್ರಾಂತಿ ಯಲ್ಲಿ ಪಾಲ್ಗೊಂಡು ಕ್ರಾಂತಿ ಕೈಗೂಡಿ ಉಳಿದವರು ಬಯಲಾದ ಮೇಲೂ ಹಲವು ದಿವಸ ಬಾಳಿ ಹೊಸಧರ್ಮ ನೆಲೆಗೊಂಡುದನ್ನು ನೋಡಿ ಬಯ ಲಾದಳಾ ತಾಯಿ. (ಕ್ರಿ. ಶ. ಸುಮಾರು ೧೧೮೦.)

ಆ ಎಣ್ಣೆಹೊಳೆ ಸ್ಥಳದಲ್ಲಿ ಸಮಾಧಿ ಇದೆ. ಕ್ರಿಯಾ ಸಿದ್ಧಿಯ ಮಹ ದಾನಂದದಲ್ಲಿ ಬೆರೆದ ನಾಗಮ್ಮನ ಹೆಸರು ಚಿರಸ್ಥಾಯಿಯಾಗಿದೆ.

ಜಗವ ಬೆಳಗಿದ ಜೀವರತ್ನಗಳು ಬಸವಣ್ಣ, ಚೆನ್ನಬಸವಣ್ಣ. ನಾಗಮ್ಮ!

ಚಿನ್ನಾದ ಚಿದ್ಬಿಂದು ಚಿತ್ಕಳೆಯ ಮೀರಿದ
ಚಿನ್ಮಯ ಮೂರ್ತಿ ನೀನಿರುವೆ! ಸೋ
ಚಿನ್ಮಯ ಮೂರ್ತಿ ನೀನಿರುವೆ, ಷಡುತಲದಯ್ಯ
ಚೆನ್ನಬಸವೇಶಂಗೆ ಜಯ ಜಯತು। ಸೋ



* ಅಕ್ಕ ನಾಗಮ್ಮನವರ ಜೀವನವನ್ನೇ ಕುರಿತು ಬರೆದ ನಮ್ಮ 'ಕ್ರಾಂತಿಗಂಗೋತ್ರಿ' ಪುಸ್ತಕವನ್ನು ಓದಿ, ಆ ತಾಯಿಯ ಘನ ವ್ಯಕ್ತಿತ್ವವನ್ನು ಅರಿತುಕೊಳ್ಳಬಹುದು.

# ೧೨. ವ್ಯಕ್ತಿತ್ವದ ಹಿರಿಮೆ.

ಹಿಂದಿನ ಪ್ರಕರಣಗಳಲ್ಲಿ ಚೆನ್ನಬಸವಣ್ಣನವರ ಚಾರಿತ್ರಿಕ ರೂಪಕವನ್ನು ಯಥಾಮತಿ ರೂಪಿಸಿ ಕನ್ನಡಿಗರ ಮುಂದಿರಿಸಿದ್ದೇನೆ, ಇದೊಂದು ಅವರ ಜೀವನದ ಶಬ್ದಚಿತ್ರ! ಇದರಲ್ಲಿ ಸಂದರ್ಭಾನುಸಾರವಾಗಿ ತೋರಿಬರುವ ಅವರ ವ್ಯಕ್ತಿತ್ವದ ಘನತೆ, ಗೌರವ, ಸಮ್ಯಗ್ ಜ್ಞಾನ, ಸೈದ್ಧಾಂತಿಕ ನೈಪುಣ್ಯ, ಸಾಹಿತ್ಯಿಕ ಪ್ರಜ್ಞೆ, ಇವುಗಳ ಪರಿಚಯವನ್ನು ಸುಹೃದಯರು ಗ್ರಹಿಸಿದ್ದಾರೆಂದು ಭಾವಿಸಿರುವೆ. ಈಗ ಇವುಗಳನ್ನೇ ಸಂಗ್ರಹವಾಗಿ ಈ ಪ್ರಕರಣದಲ್ಲಿ ನಿರೂಪಿಸಲು ಬಯಸಿರುವೆನು.

## ದಾರ್ಶನಿಕ ಯೋಗಿ

ಚೆನ್ನಬಸವಣ್ಣನವರು ಶರಣಶ್ರೇಷ್ಠರು: ಉನ್ನತವಾದ ಸ್ವಯಮಾತ್ಮ ಸಾಧನೆಯಿಂದ ಪರಮಯೋಗಾನಂದವನ್ನು ಅನುಭವಿಸಿದ ಮಹಾಯೋಗಿಗಳು. ಆದರೆ ಅವರು ಕೇವಲ ಇಷ್ಟು ಮಾತ್ರ ಆದವರಲ್ಲ, ಇಂತಹ ಮಹಾನುಭಾವಿಯೂ ಸರ್ವಜೀವರ ಉದ್ಧಾರಕ್ಕಾಗಿ ನಿರತಿಶಯ ಶಾಂತಿಯ ಸಾಧನೆಯ ಮಾರ್ಗವನ್ನು ಪರಿಶೀಲಿಸಿ ನಿರ್ದಿಷ್ಟಗೊಳಿಸಿ ಪ್ರತಿಷ್ಠಾಪಿಸಿದ ಜ್ಞಾನಯೋಗಿ! ದಾರ್ಶನಿಕಯೋಗಿ!! ಮರಿತೋಂಟದಾರ್ಯರ

'ಶಿವ ತತ್ವಾಮೃತಾಸ್ವಾದ ಚೇತಸೇ ಯೋಗಿನೇ ನಮಃ
ಶ್ರೀ ಚನ್ನಬಸವೇಶಾಯ ಷಟ್‌ಸ್ಥಲ ಬ್ರಹ್ಮವಾದಿನೇ'

ಈ ನಮಸ್ಕೃತಿಯ ಸ್ತುತಿಯ ರಹಸ್ಯ ಅದನ್ನೇ ಸೂಚಿಸುತ್ತದೆ. ವೀರಶೈವರ ದರ್ಶನವು ಶಕ್ತಿವಿಶಿಷ್ಟಾದ್ವೈತ! ಇದರ ಮೂಲಗಳು ವೇದೋಪನಿಷತ್ತುಗಳಲ್ಲಿ (ಮುಖ್ಯವಾಗಿ ಶ್ವೇತಾಶ್ವೇತರ ಉಪನಿಷತ್ತಿನಲ್ಲಿ ಭಗವದ್ಗೀತೆಯಲ್ಲಿ ಇವೆ. ಶಿವಾಗಮಗಳಲ್ಲಿ ಸ್ಪಷ್ಟವಾದ ಪ್ರತಿಪಾದನೆಯಿದೆ. ಈ ದರ್ಶನದ ಸಾಧನೆಯ ಮಾರ್ಗ ಷಟ್‌ಸ್ಥಲ ಮಾರ್ಗವು. ಇದನ್ನು ನಿರ್ಣಯಿಸಿ ಸಿದ್ಧಾಂತಗೊಳಿಸಿದವರು ಚೆನ್ನಬಸವಣ್ಣನವರು. ನಿರ್ಣಯಗೊಳಿಸಿದರೆಂದರೆ ಇಲ್ಲದುದನ್ನು ಹೊಸದಾಗಿ ಹೇಳಿದರೆಂದಲ್ಲ. ಇದ್ದುದನ್ನು ಪರಿಷ್ಕರಿಸಿ, ಹಸನಾಗಿಸಿ ಸಂಸ್ಕಾರಗೊಳಿಸಿ

ದರು; ಸ್ಪಷ್ಟಾರ್ಥಕ್ಕೆ ಹೊಂದಿಸಿದರು; ವೈಯಕ್ತಿಕ ಆಚರಣೆಗೆ ಮಾತ್ರ ಅಸ್ತವಾಗಿದ್ದುದನ್ನು ಕೌಟುಂಬಿಕವಾಗಿ, ಸಾಮಾಜಿಕವಾಗಿ ಅನುಸಂಧಾನಗೈಯಲು ಅಣಿಗೊಳಿಸಿದರು, ಎಂದರ್ಥ! ಹೀಗೆ ಅವರು ಷಟ್‌ಸ್ಥಲ ನಿರ್ಣಾಯಕರು. ಷಟ್‌ಸ್ಥಲೋದ್ಧಾರಕರು! ಆ ಕಾಲದ ಮತ್ತು ಮುಂದಿನ ಕಾಲದ ಅನುಭಾವಿಗಳು ಶಿವಯೋಗಿಗಳು ಇದನ್ನು ಹೇಳಿ, ಅವರನ್ನು ಮನವಾರೆ ಕೊಂಡಾಡಿದ್ದಾರೆ. ಅವರ ಕೆಲವು ಉಕ್ತಿಗಳು ಉದ್ಗಾರಗಳು ಹೀಗಿವೆ:

ಬಸವಣ್ಣ:– ಷಡುಸ್ಥಲದ ಮೂರ್ತಿಯಾಗಿ ಬಂದೆಯಲ್ಲಾ ಚನ್ನಬಸವಣ್ಣ!

ಸಿದ್ಧರಾಮ:– ಷಡ್ವಿಧಸ್ಥಾಪನಾಚಾರ್ಯನಾಗಿ ವೀರಶೈವ ಪ್ರತಿಷ್ಠೆಯ ಮಾಡಲೋಸುಗ ಬಂದ ನಯ್ಯಾ ಗುರು ಚನ್ನಬಸವಣ್ಣ

ಮರುಳ ಶಂಕರದೇವ:– ಷಡುಸ್ಥಲ ಬ್ರಹ್ಮ. ಷಡುಸ್ಥಲ ಚಕ್ರವರ್ತಿಯಯ್ಯಾ ಚನ್ನಬಸವಣ್ಣನು

ಹಡಪದ ರೇಚಣ್ಣ:– ಚನ್ನಬಸವೇಶ್ವರ ಸ್ವಾಮಿಗಳು ಅನುಭವ ಮಂಟಪ ದಗದ್ದುಗೆಯ ಮೇಲೆ ಮೂರ್ತಮಾಡಿ ಎಲ್ಲ ಶಿವಗಣಂಗಳಿಗೆ ನಿರೂಪಿಸಿದ ಸಕೀಲದ ವಚನಂಗಳು

ಮೊ. ಮಾಯಿದೇವ:– ಷಟ್‌ಸ್ಥಲಧೀರ, ಚಿತ್‌ಸುಧಾಂತರಂಗ ಚೆನ್ನಬಸವಣ್ಣನು

ಚಾಮರಸ:– ಷಟ್‌ಸ್ಥಲವನುದ್ಧರಿಸಿದ ಗುರು ಚನ್ನಬಸವಣ್ಣಂಗೆ ಶರಣಾರ್ಥಿ

ಕಲ್ಲುಮಠದ ಪ್ರಭುದೇವ:– ವೀರಶೈವ ಷಟ್‌ಸ್ಥಲಜ್ಞಾನಾಚಾರ್ಯ ಚೆನ್ನಬಸವಣ್ಣ.

ಸುರಂಗ ಕವಿ:– ವರಭಕ್ತಿಸ್ಥಲ ಮುಖ್ಯ ಷಟ್‌ಸ್ಥಲ ಮಹಾ ಮಾರ್ಗಂಗಳಂ ಪೇಳ್ದ ಮದ್ಗುರುನಾಥ ಚೆನ್ನಬಸವೇಶ!

ಮುಪ್ಪಿನ ಷಡಕ್ಷರಿ:– ಷಟ್‌ಸ್ಥಲ ಚನ್ನಬಸವ.

ವಿರಕ್ತ ತೋಂಟದಾರ್ಯ:– ಕಲ್ಯಾಣದೊಳಿರ್ಪ ಶರಣಜನಕ್ಕೆ ಷಟ್‌ಸ್ಥಲಮಾರ್ಗವನೆ ಕರುಣದಿಂದ ಬೋಧಿಸಿ ನಿಲ್ಲಿಸಿದ ಚಿದ್ಘನ ಪರಂಜ್ಯೋತಿ ಸ್ವರೂಪಂಗೆ ಚೆನ್ನಬಸವಂಗೆ ವಂದಿಸುವೆನು.

ವಿರೂಪಾಕ್ಷ ಪಂಡಿತ– ಶಿವಗಣಕ್ಕೆ ಷಟ್‌ಸ್ಥಲಮಾರ್ಗಮಂ ತಿಳುಪಿ ಸುಮುಕ್ತಿಯೊಳಿಂಬಿಟ್ಟ ರಮಗುರು ಚೆನ್ನಬಸವಂಗೆ ಶರಣು.

ಮರಿ ತೋಂಟದಾರ್ಯ– ಷಟ್‌ಸ್ಥಲ ಬ್ರಹ್ಮವಾದಿ.

ಗುರುಸಿದ್ಧಕವಿ– ಎನ್ನ ರಕ್ಷಿಸು ಷಟ್‌ಸ್ಥಲ ಸಂಪನ್ನ ಚೆನ್ನಬಸವಣ್ಣ

ಚೆನ್ನಬಸವಕವಿ– ಷಟ್‌ಸ್ಥಲವರ್ಯಾ, ವೀರಶೈವಾಚಾರ್ಯ

ಬಸವಕವಿ–ಷಟ್‌ಸ್ಥಲ ಲೋಲ.

ಇದಲ್ಲದೆ ಏಲೇಶ್ವರ ಕೇತಯ್ಯ, ಚೆನ್ನಬಸವಣ್ಣನವರನ್ನು 'ಜ್ಞಾನಸೂತ್ರಧಾರಿ ಎಂದು ಕರೆದಿದ್ದಾರೆ. ತೋಂಟದ ಸಿದ್ಧಲಿಂಗಶಿವಯೋಗಿಗಳು ಚೆನ್ನಬಸವಣ್ಣನೇ ಎನ್ನಂತರಂಗದಿ ಸುಜ್ಞಾನ ಪ್ರಾಣಲಿಂಗ ಎಂದಿದ್ದಾರೆ. ಪರಂಪರೆಯ ಜಾಸಪ

ಪದ ಹಾಡುಗಳಲ್ಲಿ ಜೋಗುಳಪದಗಳಲ್ಲಿ 'ಷಡುಸ್ಥಲದಯ್ಯಾ' ಎಂದು ಸಂಬೋಧಿಸಲ್ಪಟ್ಟಿದ್ದಾರೆ. ಇವೆಲ್ಲವುಗಳನ್ನು ಅವಲೋಕಿಸಿದರೆ ಚೆನ್ನಬಸವಣ್ಣನವರು ಷಟ್ ಸ್ಥಲಶಾಸ್ತ್ರಸಿದ್ಧಾಂತದ ನವನಿರ್ಮಾಪಕರೆಂಬಲ್ಲಿ ಸಂದೇಹವಿಲ್ಲ.

ಇಲ್ಲಿ ಅವಶ್ಯವಾಗಿ ಪ್ರಸ್ತಾಪಿಸಬೇಕಾಗಿದ್ದ ಒಂದು ವಿಚಾರ ಏನೆಂದರೆ- ಸಂಸ್ಕೃತ-ಭಾಷೆಯ 'ಸಿದ್ಧಾಂತ ಶಿಖಾಮಣಿ'ಯು ವೀರಶೈವ ಷಟ್‌ಸ್ಥಲ ಶಾಸ್ತ್ರದ ಪರಿಪೂರ್ಣಗ್ರಂಥವಾಗಿದೆ, ಇದರ ಕರ್ತೃರಾದ ಶ್ರೀ ಶಿವಯೋಗಿ ಶಿವಾಚಾರ್ಯರ ಜೀವಿತಕಾಲದ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಚೆನ್ನಬಸವಣ್ಣನವರು, ಶಿವಯೋಗಿ ಶಿವಾಚಾರ್ಯರು ಇವರಿಬ್ಬರಲ್ಲಿ ಯಾರು ಮೊದಲಿಗರಾದರೂ, ಇನ್ನೊಬ್ಬರ ಜ್ಞಾನ ಪ್ರತಿಭೆಗೆ ಅವರ ಲೋಕೋದ್ಧಾರಕ ಕೃತಿಗಳ ಶ್ರೇಯಸ್ಸಿಗೆ ಯಾವ ನ್ಯೂನತೆಯೂ ತಗಲದು. ಷಟ್‌ಸ್ಥಲದ ಸಿದ್ಧಾಂತವನ್ನು ಇಬ್ಬರೂ ಸ್ವತಂತ್ರವಾಗಿಯೇ ಉದ್ಧರಿಸಿ ಬಲಪಡಿಸಿದ್ದಾರೆ. ಭಾಷೆಗಳು ಭಿನ್ನವಾಗಿವೆ. ಆತ್ಮವಿಕಾಸದ ಹಂತಗಳನ್ನು ನಿರ್ಣಯಿಸುವಾಗ ಪ್ರಾಥಮಿಕ ವಿಭಾಗಗಳಲ್ಲಿ ಲಿಂಗಾಂಗಸ್ಥಲಗಳನ್ನು ಇಬ್ಬರೂ ಆಗಮಗಳಂತೆ ಒಂದೇ ತೆರನಾಗಿ ಇಟ್ಟುಕೊಂಡಿದ್ದರೂ. ಉಪವಿಭಾಗಗಳನ್ನು ಬೇರೆ ಬೇರೆ ನಿರ್ದೇಶಿಸಿ ಗುರಿ ತಲುಪಿದ್ದಾರೆ, ಸಂಸ್ಕೃತಕ್ಕಿಂತ ಸುಲಭವಾಗಿ ಕನ್ನಡ ವಚನಗಳು ನಾಡವರ ಹೃದಯದ ಆಳಕ್ಕೆ ಇಳಿಯುವ ಮಾತು ಬೇರೆ! ಅದು ಇರಲಿ.

ಕಾಮಿಕ-ಸೂಕ್ಷ್ಮ ಆಗಮಗಳಲ್ಲಿ 'ವೀರ ಶೈವ' ಹೆಸರು ಮತ್ತು ಇಷ್ಟಲಿಂಗ, ಪ್ರಾಣಲಿಂಗಗಳ ಲಕ್ಷಣ ಇವುಗಳ ಪ್ರಸ್ತಾಪ ಬರುತ್ತದೆ. ಇನ್ನು ಕೆಲವು ಆಗಮಗಳಲ್ಲಿ ಷಟ್‌ಸ್ಥಲಗಳ ವಿವರ ಇರುತ್ತದೆ. ಅವುಗಳಲ್ಲಿ ಪಾರಮೇಶ್ವರ ಆಗಮ ಮುಖ್ಯ! ಅದರಲ್ಲಿ 'ಸ್ಥಲ' ಶಬ್ದದ ನಿರ್ವಚನವಿದೆ. ಅದರ ಷಡ್ವಿಧಗಳ ವಿವರವಿದೆ. 'ಷಟ್‌ಸ್ಥಲಕ್ಕೆ ಅಧಿಕಾರಿಯಾಗಲು ಪರಮಶಿವಭಕ್ತಿಯೇ ಅಗತ್ಯ! ಅಧಿಕಾರಿ ಮೊದಲು ಮಲತ್ರಯಗಳ ಬಂಧನದಿಂದ ಬಿಡುಗಡೆಯಾಗಬೇಕು. ಅದು ಸದ್ಗುರುವಿನ ಕೃಪೆಯಿಂದ ಸಾಧ್ಯ' ಎಂದು ಹೇಳಲಾಗಿದೆ. ಈ ಸಾಧನೆಯಲ್ಲಿ ಗುರು-ಲಿಂಗ-ಜಂಗಮಾದಿ ಅಷ್ಟಾವರಣಗಳ ಆಚರಣೆ ಅವಶ್ಯವೆಂದು ಹೇಳಿದೆ. ಷಟ್‌ಸ್ಥಲಮಾರ್ಗದಲ್ಲಿ ಶುದ್ಧಜೀವನು ನಿವೃತ್ತಿಯಿಂದ ಶಿವೈಕ್ಯನಾಗುವದನ್ನು ಸೂಚಿಸಲಾಗಿದೆ. ಆದರೆ ಶೈವಶಾಖೆಗಳಲ್ಲಿಯ ಅತೃಪ್ತಿಕರವಾದ ಮೋಕ್ಷವಿಚಾರಗಳಿಗೂ, ಕೆಲವು ಪಂಗಡಗಳಲ್ಲಿಯ ಮೂಢಾಚಾರ, ವಾಮಾಚಾರ ಅನಾಚಾರಗಳಿಗೂ ಬಸವಾದಿ ಪ್ರಮಥರು ರೋಷಿಕೊಂಡಿದ್ದರು. ಅಲ್ಲದೆ ಅವುಗಳಲ್ಲಿಯೇ ಶ್ರೇಷ್ಠವೆನಿಸುವ ಆಗಮೋಕ್ತ ವೀರಶೈವದ ವಿಧಿ ವಿಧಾನಗಳ

ಲ್ಲಿಯೂ ದೋಷಗಳನ್ನು ಕಂಡುಕೊಂಡಿದ್ದರು. ಅಂತಹ ಕೆಲವು ಸಂಗತಿಗಳು ಹೀಗಿವೆ:

ಪಾರಮೇಶ್ವರದಲ್ಲಿ ಇತರ ಶೈವಗಳ ಪೂಜಾವಿಧಾನ ಹೋಮ ಹವನ ಕರ್ಮಗಳ ವಿವರ ಇರುತ್ತದೆ. ಅದಕ್ಕೆ ಜತೆಜತೆಯಾಗಿ ವೀರಶೈವದ ವಿವರಣೆಯೂ ಬರುತ್ತದೆ. ವೀರಶೈವರ ದೀಕ್ಷಾವಿಧಾನದಲ್ಲಿಯೂ ಹೋಮ ಹವಿಸ್ಸುಗಳ ಕರ್ಮಭಾಗಗಳನ್ನೂ ಹೇಳಿದೆ. ಹೀಗೆ ವೀರಶೈವವು ಮಿಕ್ಕ ಶೈವಗಳ ಪ್ರವಾಹಕ್ಕೆ ಸಿಕ್ಕು ವೈದಿಕ ಪ್ರಭಾವಕ್ಕೆ ಒಳಗಾಗಿ ಕರ್ಮಕಾಂಡದಿಂದ ಬಂಧಿತವಾದಂತಿದೆ. ಅದರ ಆತ್ಮಪ್ರಕಾಶ ಮಿಂಚಿ ಮಿಂಚಿ ಅಡಗುತ್ತಿದ್ದಂತಿದೆ.

ಎರಡನೆಯದಾಗಿ ಜಾತಿವರ್ಣಗಳ ವ್ಯವಸ್ಥೆಯುಳ್ಳ ವೈದಿಕ ಸಂಪ್ರದಾಯದ ಸಂಸರ್ಗದಿಂದ ಆಗಮಗಳ ವೀರಶೈವವು ಮುಕ್ತವಾಗಿಲ್ಲ. ಅಲ್ಲಿ ಜಾತಿಯ ನಿರ್ಮೂಲನದ ಸುಳುಹು ಸ್ಪಷ್ಟವಾಗಿಲ್ಲ. ಆಚರಣೆಯಲ್ಲಿ ಜಾತಿಕುಲಗಳಿದ್ದವು, ಇದು ಮೂಲ ಮಾನವತೆಯ ಧರ್ಮಕ್ಕೆ ದ್ರೋಹವೆಂದು ಶರಣರು ಸಹಜವಾಗಿ ಬಗೆದರು. ಸಮತೆ, ಸೋದರತ್ವ ಸಾಮಾಜಿಕ ಐಕ್ಯಗಳಿಗೆ ಮಾರಕವೆಂದು ಭಾವಿಸಿದರು. (ಈಗಲೂ ಆಗಮಗಳ ಕಡೆಗೆ ಕೈಮಾಡಿ, ಲಿಂಗವಂತರಲ್ಲಿ ಒಳಪಂಗಡಗಳನ್ನು ಅವುಗಳಲ್ಲಿ ತಾರತಮ್ಯಗಳನ್ನೂ ಸಮರ್ಥಿಸುವ ಮಠಾಧಿಪತಿಗಳಿದ್ದಾರೆ ಅಷ್ಟಾವರಣಾಂಕಿತರಾದ ವೀರಶೈವರನೆಲ್ಲ ಸರಿಸಮನಾಗಿ ಅವರು ಕಾಣುತ್ತಿಲ್ಲ) ಇರಲಿ!

ಮೂರನೆಯದಾಗಿ ಆಗಮಗಳ ವೀರಶೈವದಲ್ಲಿ ಪೂಜಾ ವಿಧಾನ, ದೀಕ್ಷಾಕ್ರಮ ಇತ್ಯಾದಿ ಬಾಹ್ಯಕರ್ಮಗಳಿಗೂ ಬಹಿರಂಗ ವೇಷಲಾಂಛನಗಳಿಗೂ ಅತಿಶಯ ಮಹತ್ವ ಕೊಡಲಾಗಿದೆ. ಪಂಚಸೂತಕ ನಿವಾರಣೆ, ಗುರು ಲಿಂಗಜಂಗಮಗಳ ಮಹತ್ವ ಇವು ಪರಿಶುದ್ಧಗೊಳ್ಳಬೇಕಾಗಿದ್ದವು. ಪರರಿಗೆ ಭಾರವಾಗದ ಸ್ವಾವಲಂಬನದ ಪರಿಶುದ್ಧವಾದ ಶ್ರಮಜೀವನಕ್ಕೆ ಮಹತ್ವ ಕೊಟ್ಟಿರಲಿಲ್ಲ.

ಈ ಕಾರಣಗಳಿಂದ ಆಗಿನ ಪ್ರಚಲಿತ ಧರ್ಮಾಚರಣೆ ಅಸಮ್ಮತಗೊಂಡು ಪ್ರಮಥರು ಧಾರ್ಮಿಕ ಕ್ರಾಂತಿಗೆ ಸಿದ್ಧರಾದರು. ಅನುಭಾವದ ಅಭ್ಯುದಯದಲ್ಲಿ ಅರಿವಿನ ತೃಪ್ತಿಯನ್ನು ಕಾಣಲು ಆತುರಗೊಂಡರು. ತಾತ್ವಿಕವಿಚಾರಮಂಥನ ಕಲ್ಯಾಣದಲ್ಲಿ ವೇದಿಕೆಯೇರಿದೊಡನೆ ನೂರಾರು ಅನುಭಾವಿಗಳು ಸಾವಿರಾರು ಜಿಜ್ಞಾಸುಗಳು ಅಲ್ಲಿ ಸೇರಿದರು. ಎಲ್ಲ ಅನುಭಾವಿಗಳ ಅರಿವಿನ ಸಾರಸಂಗ್ರಹವನ್ನು ಚೆನ್ನಬಸವಣ್ಣನವರು ತಮ್ಮ ಜ್ಞಾನಾಗ್ನಿಯಿಂದ ಪುಟಕ್ಕಿಕ್ಕಿ ಪ್ರಭುದೇವರಿಂದ ಬೆಳಗಿಸಿ ಷಟ್‌ಸ್ಥಲ ಶಾಸ್ತ್ರಸಿದ್ಧಾಂತವನ್ನು ನಿರ್ಣಯಿಸಿದರು; ಶ್ರೇಯೋಭಾಗಿಗಳಾದರು.

ಚೆನ್ನಬಸವಣ್ಣನವರು ದೀಕ್ಷಾಗುರುಗಳಾದ ಬಸವಣ್ಣನವರಲ್ಲಿಯೂ ಜ್ಞಾನ ಗುರು ಪ್ರಭುದೇವರಲ್ಲಿಯೂ ಇರಿಸಿದ ಭಕ್ತಿ ಸೀಮಾತೀತವಾಗಿತ್ತು.

## ಆತ್ಮ ಸಾಹಿತ್ಯರಚನೆ

'ಕಾಯಸಾಹಿತ್ಯ ಎಲ್ಲಿಯಾಡೆಯೂ ಉಂಟು ಆತ್ಮಸಾಹಿತ್ಯ ಅಪೂರ್ವ' ಎಂದಿದ್ದಾರೆ ಚೆನ್ನಬಸವಣ್ಣನವರು. ೯ನೆಯ ಶತಮಾನದಿಂದ ಹುಲುಸಾಗಿ ಬೆಳೆದು ಬಂದ ಕನ್ನಡ ಸಾಹಿತ್ಯವನ್ನು ಅವರು ಕಂಡಿದ್ದಾರೆ. ಅದರಲ್ಲಿ ಬಹು ಭಾಗವು ಆಶ್ರಯವಿತ್ತ ರಾಜರ ಹೊಗಳಿ ಉದರಪೋಷಣೆ ಪಡೆಯುವದಕ್ಕಾಗಿ ಮಾನ ಕೀರ್ತಿಗಳಿಗಾಗಿ ಉಂಟಾದದ್ದು. ಅದು ತನುಗುಣದ್ದು 'ಮರ್ತ್ಯರ ಮನದ ಮೈಲಿಗೆಯ ಕಳೆಯಲೆಂದು ಗೀತಮಾತೆಂಬ ಜ್ಯೋತಿಯ ಬೆಳಗಿಟ್ಟರು ಶರಣರು ಎಂಬ ಅವರ ನುಡಿಯಲ್ಲಿ ಗೀತಮಾತುಗಳು (ವಚನಗಳು) ಆತ್ಮ ಸಾಹಿತ್ಯವೆಂಬ ಅಭಿಪ್ರಾಯ ಸ್ಪಷ್ಟವಿದೆ, ಪರಬ್ರಹ್ಮವು ನಿಶ್ಶಬ್ದವೇದ್ಯ, ನಿಜ! ಸಾಧನೆಯ ಹಂತದಲ್ಲಿ ಶಾಸ್ತ್ರಪ್ರವಚನಗಳಲ್ಲಿ, ಗುರುಬೋಧೆಯಲ್ಲಿ ಶಬ್ದವೇ ಮಾಧ್ಯಮ ವಾಗಿದೆ. 'ಶಬ್ದಸೋಪಾನದ ಬಲದಿಂದ ನಿಶ್ಶಬ್ದ ಸೋಪಾನವ ಕಟ್ಟಿ ನಡಿಸಿ ದರು ನಮ್ಮ ಪುರಾತನರು, ಎಂದ ಚೆನ್ನಬಸವಣ್ಣನವರು, ತಮಗಿಂತ ಮೊದಲಿ ನವರ ವಚನಗಳನ್ನು ನೋಡಿ ಪ್ರಭಾವಿತರಾಗಿಯೇ ತಮ್ಮ ಶಾಸ್ತ್ರವನ್ನು ವಚ ನಗಳಲ್ಲಿ ಬಿತ್ತರಿಸಿದರು. ಬಸವಣ್ಣನವರ ಭಾವತೀಕ್ಷ್ಣತೆ ಇವರ ವಚನಗಳಲ್ಲಿ ಕಡಿಮೆ! ನಿರ್ಣಯ ನಿರೂಪಣೆಯ ಇವರ ವಚನಗಳಲ್ಲಿ ಸ್ಪಷ್ಟತೆ, ಕಟುತ್ವ ಖಂಡನೆ ಅನಿವಾರ್ಯ! ಗುರು ಭಕ್ತಿಯಲ್ಲಿ ಸ್ವಯಂವಾತ್ಮ ಸಾಧನೆಯಲ್ಲಿ ಹೇಳಿದ ವಚನಗಳು ಮೃದುಮಧುರವಾಗಿಯೂ ವಿನಯಪೂರ್ಣವಾಗಿಯೂ ಇವೆ. ಇವರಿಂದ ಕನ್ನಡ ಭಾಷೆಯು ಸ್ವತಂತ್ರವಾಗಿ ಒಂದು ತತ್ವ ದರ್ಶನಸಾಹಿತ್ಯ ವನ್ನು ನಿರ್ಮಿಸಿ ಬೆಳಗಿಸಿಕೊಂಡ ಕೀರ್ತಿ ಪಡೆದು ದೇವವಾಣಿಯಾಯಿತು ಸಂಸ್ಕೃತವನ್ನು ಬಿಟ್ಟರೆ ಮಿಕ್ಕ ಭಾರತೀಯ ಭಾಷೆಗಳಿಗೆ ಈ ಗೌರವವಿಲ್ಲ, ಈ ಶ್ರೇಯಸ್ಸಿಗೆ ಕಾರಣರಾದ ಶರಣರೊಳಗೆ ಅದರ ಬಹುದೊಡ್ಡಪಾಲು ಚೆನ್ನಬಸವಣ್ಣನವರದು.

ಕರಣಹಸಿಗೆ (ಪಿಂಡಾಂಡದ ವಿಸ್ತೃತ ವಿವರಣೆ), ಮಿಶ್ರಾರ್ಪಣ (ಅರ್ಪಣಭಾವ ವಿಚಾರ) ಇವು ಚೆನ್ನಬಸವಣ್ಣನವರ ಇತರ ಮುಖ್ಯ ಕೃತಿಗಳು

## ಸಾಹಿತ್ಯಿಕ ಸೊಗಸು

ಚೆನ್ನಬಸವಣ್ಣನವರ ವಚನಗಳು ಸಿದ್ಧಾಂತನಿರೂಪಣೆಗಾಗಿದ್ದರೂ,

ಆ ವಚನೋಪವನದಲ್ಲಿ ಅಲೆದರೆ ಧ್ವನಿ, ರಸ, ಭಾವ. ಅಲಂಕಾರ ಮುಂತಾದ

ಕಾವ್ಯಸೌರಭದ ಸೊಗಸನ್ನು ರಸಿಕರು ನಿಶ್ಚಯವಾಗಿಯೂ ಅನುಭವಿಸುತ್ತಾರೆ ಅವೆಲ್ಲವುಗಳಿಗೆ ನಿದರ್ಶನಗಳನ್ನು ಕೊಡಲು ಈ ಚಿಕ್ಕ ಹೊತ್ತಿಗೆಯಲ್ಲಿ ಸಾಧ್ಯವಿಲ್ಲ. ಕೆಲವೇ ಉಪಮಾರೂಪಕಾಲಂಕಾರಗಳ ದರ್ಶನ ಮಾಡಿ ಸಾಗೋಣ!

ಅಂಧಕನ ಕೈ ಅಂಧಕ ಹಿಡಿದಂತೆ (ಅಯೋಗ್ಯ ಗುರು ಶಿಷ್ಯರು)

ಅರಿವಾಗಲಿ ಇದ್ದಿತ್ತು; ಮರೆದಾಗಲಿ ಬಿದ್ದಿತ್ತು.

ಗುಬ್ಬಿ ಹೇವರ ಮನೆಯು ತನ್ನ ಮನೆ ಎಂದಂತೆ.

ಕತ್ತಲೆಯ ಮನೆಯಲಿದ್ದ ಮನುಜರು ಜ್ಯೋತಿಯನೆನಿತು ಹೊತ್ತು ನೆನೆದಡೆಯೂ ಬೆಳಕಾಗಬಲ್ಲುದೇ ಬೆಂಕಿಯ ಹೊತ್ತಿಸದನ್ನಕ್ಕ?

ಜ್ಞಾನಾಮೃತವೆಂಬ ಜಲನಿಧಿಯ ಮೇಲೆ, ಸಂಸಾರವೆಂಬ ಹಾವಸೆ ಮುಸುಕಿದಂತೆ

ಬುತ್ತಿಯ ಕಟ್ಟಿ ಹೊಟ್ಟೆಯ ಮೇಲಿಕ್ಕಿಕೊಂಡಿದ್ದರೆ. ಹಸಿವು ಹೋಗಿ ಅಪ್ಯಾಯನವಳವಡುವುದೇ?

ಕಾಂತೆಯ ರತಿಗುಣವರ್ಜಿತನಾಗಿ ಕಾಶೀಕ್ಷೇತ್ರವಾಸಿಯಾಗಿರಬಹುದು,

ಹೆಗ್ಗಣವನಿಕ್ಕಿ ನೆಲಗಟ್ಟು ಕಟ್ಟಿದಂತೆ.

ಕಬ್ಬುನಗಿದ ಗುಣ ಬಲ್ಲುದೇ ಪಾಲುಸವಿಯ?

ಕಿರಿದಾದ ಬೀಜದಲ್ಲಿ ಹಿರಿಯ ತರುವಡಗಿದ ಪರಿಯಂತೆ.

ಜ್ಞಾನದೀಪ್ತಿಯ ಬೆಳಗುವ ತೈಲವಾವುದೆಂದರೆ ಶಿವಶರಣರ ನುಡಿಗಡಣದ ಒಸರು

## ಸರ್ವಾಚಾರ ಸಂಪನ್ನತೆ.

ಚೆನ್ನಬಸವಣ್ಣನವರು ಸದಾಚಾರ ಸತ್ಕ್ರಿಯೆಗಳಿಗೆ ಬಹಳ ಮಹತ್ವ ಕೊಟ್ಟಿದ್ದಾರೆ. ತಮ್ಮ ಗುರು ಬಸವಣ್ಣನವರನ್ನು 'ಸರ್ವಾಚಾರ ಸಂಪನ್ನ'ರೆಂದು ವರ್ಣಿಸಿದ್ದಾರೆ. ತಾವೂ ಅನುಸರಿಸಿದ್ದಾರೆ. ಕ್ರಿಯೆಯೊಂದರೆ ಕಾಯಕ-ಉಪಾಸನೆಗಳೆರಡನ್ನೂ ಶಿವನಿಗಾಗಿ ಶಿವಾರ್ಪಣ ಬುದ್ಧಿಯಿಂದ ಮಾಡುವ ಕರ್ಮ! ಅದು ಸತ್ಯ ಶುದ್ಧವಾಗಿರಬೇಕು. ಕ್ರಿಯಾಜ್ಞಾನಗಳೆರಡೂ ಐಕ್ಯದವರೆಗೆ ಸಾಮರಸ್ಯ ಹೊಂದಿಯೇ ನಡೆಯಬೇಕು. ನಿಜದ ಅರಿವು ಸರ್ವಶೂನ್ಯವಾಗಿರುವದು; ಆ ವರೆಗಿನ ಜ್ಞಾನವು ಕ್ರಿಯೆಯೊಡನೆ ಕೂಡಿಯೇ ಇರಬೇಕು. ಮೊದಲು ಕ್ರಿಯೆಯು ಪ್ರಧಾನವಾದರೆ ಮುಂದೆ ಜ್ಞಾನವು ಪ್ರಧಾನವಾಗುವದು. ಒಂದನ್ನು ಬಿಟ್ಟು ಒಂದು ಇರಲಾರವು, ಇರಬಾರದು. ಜ್ಞಾನದಂತೆ ನಡೆಯದಿದ್ದರೆ ಅದೇ ಅಜ್ಞಾನ (ಕರ್ಮ)ವೆನ್ನುತ್ತಾರೆ. ಚೆನ್ನಬಸವಣ್ಣನವರು!

ಶಿವಭಕ್ತರು ಶಿವಪ್ರಸಾದದಿಂದ ಜೀವಿಸಿ ತಾವೂ ಕೂಡ ಶಿವಪ್ರಸಾದವೇ ಆಗಬೇಕು. ಆದುದರಿಂದ ಜೀವನಕ್ಕಾಗಿ ನಡಿಸುವ ಉದ್ಯಮ ಪ್ರಾಮಾಣಿಕವಾಗಿ

ರಬೇಕು. ವಂಚನೆ-ಹಿಂಸೆಗಳಿಲ್ಲದೆ ಸತ್ಯ-ಶುದ್ಧವಾಗಿರಬೇಕು ಅದುವೇ ಕಾಯಕ, ಕೈಲಾಸ!

ಒಳ್ಳೆಯ ನಡತೆಗೆ ಸಾಮಾನ್ಯವಾಗಿ ಶೀಲವೆನ್ನುವರು. ಚೆನ್ನಬಸವಣ್ಣನವರು ಮಾನವರಿಗಾಗಿ ಅರವತ್ತುನಾಲ್ಕು ಶೀಲಗಳನ್ನು ಹೇಳಿದ್ದಾರೆ. ಐವತ್ತು ಆಚಾರಗಳನ್ನು ಹೇಳಿದ್ದಾರೆ. ಆಚಾರಗಳಲ್ಲಿ ಕೆಲವು ಹೀಗಿವೆ;

ಪರರ ಹೆಣ್ಣಿಗೆ ಕಣ್ಣಿಡದಿಹುದೇ ಒಂದನೆಯ ಆಚಾರ
ಪರರ ದ್ರವ್ಯವ ಅಪಹಾರ ಮಾಡದಿಹುದೆ ಎರಡನೆಯ ಆಚಾರ
ಸುಳ್ಳಾಡದಿಹುದೇ ಮೂರನೆಯ ಆಚಾರ.
ವಿಶ್ವಾಸಘಾತವ ಮಾಡದಿಹುದೇ ನಾಲ್ಕನೆಯ ಆಚಾರ
ಪ್ರಾಣಹಿಂಸೆಯ ಮಾಡದಿಹುದೆ ಐದನೆಯ ಆಚಾರ
ಸಕಲ ಶಿವಶರಣರ್ಗೆ ಸಂತೋಷಮಂ ಪುಟ್ಟಿಸುವದೇ ಆರನೆಯ ಆಚಾರ
ಸಕಲ ಜೀವಿಗಳಿಗೆ ಹಿತವ ಬಯಸುವದೇ ಹದಿನಾಲ್ಕನೆಯ ಆಚಾರ
ಮನವ ನೋಯಿಸಿ ಮಾತನಾಡದಿಹುದೇ ಇಪ್ಪತ್ತೊಂಭತ್ತನೆಯ ಆಚಾರ

ಈ ಐವತ್ತು ಆಚಾರಗಳಿಂದ ವೀರಶೈವವು ವಿಶ್ವಧರ್ಮವಾಗುವ ಅರ್ಹತೆ ಪಡೆದಿದೆ ಕ್ರಿಶ್ಚನ್ ಧರ್ಮದ 'ಹತ್ತು ಆಜ್ಞೆಗಳು' ಈ ಐವತ್ತು ಆಚಾರಗಳ ಅಂಶಗಳಾಗಿರುವವಂತೆ!

## ಸಾಮಾಜಿಕ ವಿಚಾರ

ಚೆನ್ನಬಸವಣ್ಣನವರು ಸಾಮಾಜಿಕ ಸಂಘಟನೆಯ ಮಹತ್ವವನ್ನು ಅರಿತಿದ್ದರು. ಮೊದಲು ತಮ್ಮ ಅನುಭವಕ್ಕೆ ಬಂದ ಸಮಾಜದಲ್ಲಿಯ ಮೂಢವಿಚಾರ. ಸಂಪ್ರದಾಯ ಶ್ರದ್ಧೆ, ಮೇಲು ಕೀಳು ಮುಂತಾದವುಗಳನ್ನು ಖಂಡಿಸಿ ತೊಲಗಿಸಲು ಯತ್ನಿಸುತ್ತಾರೆ. ಸಮಾಜವು ಶಾಂತಿಸುಖಗಳಿಂದ ಕೂಡಿದ್ದರೆ. ವ್ಯಕ್ತಿಯ. ಕುಟುಂಬದ ಆಧ್ಯಾತ್ಮಿಕ ಸಾಧನೆಗಳು ನಿರಾತಂಕವಾಗಿರುವವು. ಆದುದರಿಂದ ಭಕ್ತಿ ನೀತಿ ಸೋದರತ್ವಗಳನ್ನು ಉದ್ದೇಶವಾಗಿರಿಸಿಕೊಂಡು ಸಮತೆಯ ಸೂತ್ರದ ಮೇಲೆ ಸಮಾಜದ ರಚನೆಯನ್ನು ಸಾರಿದರು.

ತತ್ಪೂರ್ವದ ವೀರಶೈವವು ವೈಯಕ್ತಿಕವಾಗಿ ಮಾತ್ರ ಇದ್ದಿತೆಂದು ತೋರುತ್ತದೆ. ಒಂದೇ ಮನೆಯಲ್ಲಿ ವಿವಿಧಶೈವಗಳನ್ನು ಅನುಸರಿಸುವವರಷ್ಟೇ ಅಲ್ಲದೆ ಜೈನತತ್ವಾನುಯಾಯಿಗಳು ಕೂಡ ಇರುತ್ತಿದ್ದರು. ಈ ಅಸಂಗತವನ್ನು ಸರಿಪಡಿಸಲು ಏರ್ಪಾಡು ಮಾಡಿದರು. ವ್ಯಕ್ತಿವ್ಯಕ್ತಿಗಳು ಪರಸ್ಪರ ಅರಿವು ಮೂಡಿಕೊಂಡು, ಹಸನು ಮನಸ್ಸಿನಿಂದ ಪ್ರಾಥಮಿಕ ಸಾಧನೆಯ ಹಂತ

ದಲ್ಲಿ ಸಹಕರಿಸುವಂತೆ, ಒಂದುಗೂಡಿ ಬಾಳುವಂತೆ ಮಾಡಿದ್ದಾರೆ. ಹೀಗೆ ಅಷ್ಟಾವರಣ ಅಂಗ, ಪಂಚಾಚಾರ ಪ್ರಾಣ, ಷಟ್‌ಸ್ಥಲಗಳು ಆತ್ಮವಾಗಿರುವ ವೀರಶೈವವು ಇಹಕ್ಕೂ ಪರಕ್ಕೂ ಇಹಪರಗಳ ಸಮನ್ವಯಕ್ಕೂ ಸಲ್ಲುವಂತೆ ಸಮಾಜಧರ್ಮವನ್ನು ರೂಪಿಸಿದರು.

## ಮಹಾಪುರುಷರ ಪಂಕ್ತಿಯಲ್ಲಿ

ಶ್ರೀ ಶಂಕರಾಚಾರ್ಯರಂತೆ ಚೆನ್ನಬಸವಣ್ಣನವರು ಅಲ್ಪಾಯುಷಿ ಮಹಾತ್ಮರಾದರು ಶಂಕರಾಚಾರ್ಯರು ಅದ್ವೈತ ಮತವನ್ನು ಸ್ಥಾಪಿಸಿದರೆ ಚೆನ್ನಬಸವಣ್ಣನವರು ದ್ವೈತಾದ್ವೈತ (ಶಿವಾದ್ವೈತ) ಮತವನ್ನು ನಿರ್ಣಯಿಸಿದರು. ಅವರಂತೆ ಇವರು ವಿಜಯಕ್ಕಾಗಿ ದೇಶಾಟನ ಮಾಡಲಿಲ್ಲ ನಿಜ! ಶರಣರು ಧಾರ್ಮಿಕ ಕ್ರಾಂತಿಯನ್ನು ಕೈಕೊಂಡದ್ದು ಕರ್ನಾಟಕದಲ್ಲಿ! ಅಲ್ಲಿಯ ಅಜ್ಞರನ್ನು ದೀನದಲಿತರನ್ನು ಉದ್ಧರಿಸಬೇಕಾಗಿತ್ತು. ಅವರ ಬಳಕೆಯ ಭಾಷೆಯಲ್ಲಿಯೇ ಸಿದ್ಧಾಂತವನ್ನು ಬೋಧಿಸಬೇಕಾಗಿತ್ತು. ರಾಷ್ಟ್ರಾದ್ಯಂತ ಉಚ್ಚವರ್ಣದವರಲ್ಲಿ ತತ್ವಪ್ರಚಾರ ಮಾಡುವದು ಶರಣರಿಗೆ ಅಗತ್ಯವಾಗಿರಲಿಲ್ಲ, ಅವರ ಉದ್ದೇಶದಂತೆ ಹಿಂದೆ ಉಳಿದವರನ್ನು ಒಳಗೊಂಡು ಕನ್ನಡನಾಡಿನಲ್ಲಿ ವೀರಶೈವವು ಅಧಿಕ ಸಂಖ್ಯೆಯವರ ಧರ್ಮಸಿದ್ಧಾಂತವಾಯಿತು

ಸೀಮಿತವಾಗಿರುವ ಕನ್ನಡದ ಬದಲು, ವ್ಯಾಪಕವಾಗಿರುವ ಒಂದು ಭಾಷೆಯು ಶರಣರಆಂದೋಲನಕ್ಕೆ ಮಾಧ್ಯಮವಾಗಿದ್ದರೆ, ಬುದ್ಧ ಕ್ರಿಸ್ತ ಪೈಗಂಬರರಂತೆ ಚೆನ್ನಬಸವಣ್ಣನವರ ಹೆಸರು ಜಾಗತಿಕವಾಗಿ ಕೇಳಬರುತ್ತಿತ್ತು. ಅವರೂ ಅವರ ಸ್ವರೂಪವೇ ಆಗಿರುವ ಷಟ್‌ಸ್ಥಲ ಸಿದ್ಧಾಂತದ ತತ್ವಗಳು, ಪಾಶ್ಚಿಮಾತ್ಯರ ಭಾಷೆಯನ್ನು ಅಭ್ಯಾಸ ಮಾಡಿದ ಈಗಿನ ಮಹಾಶಿವಯೋಗಿಗಳಿಂದ ವಿಶ್ವದರಿವಿಗೆ ತರಲ್ಪಟ್ಟು ಮಾನ್ಯವಾಗುತ್ತಲಿವೆ. ಇದರಿಂದ ನಾವು ಸಂತಸ ಪಡಬೇಕು.

---

# ಅನುಬಂಧ

## ಕಾಲಸೂಚಿ

ಚೆನ್ನಬಸವಣ್ಣನವರ ಜೀವಿತಾವಧಿಯಲ್ಲಿಯ ಕೆಲವು ಘಟನೆಗಳ ಕಾಲ
ಸೂಚಿ: (ಭಿನ್ನಾಭಿಪ್ರಾಯಗಳ ಮಧ್ಯದಲ್ಲಿ ಸಮನ್ವಯಗೊಳಿಸಿದಂತೆ)

| . ಶ. ವ | |
|---|---|
| ೧೪೦ | ಚೆನ್ನಬಸವಣ್ಣನವರ ಜನ್ಮ. |
| ೧೫೨ | ಅನುಭವ ಮಂಟಪ ಸ್ಥಾಪನೆ. |
| ೧೬೩ | ಪ್ರಭುದೇವರು ಸಿದ್ಧರಾಮೇಶರೊಡನೆ ಕಲ್ಯಾಣಕ್ಕೆ ಆಗಮಿಸಿದುದು. |
| ,, | ಸಿದ್ಧರಾಮಯ್ಯನವರಿಗೆ ಲಿಂಗಧಾರಣೆ. |
| ೧೬೪ | ಶೂನ್ಯಸಿಂಹಾಸನಾರೋಹಣ. |
| ೧೬೬ | ಇಳಾಪುರಿಯಲ್ಲಿ ಯಜ್ಞಭಂಗ |
| ,, | ಚಾಲುಕ್ಯವಂಶೀಯರ ಸಂಚು ಬಲಿಯಿತು. |
| ,, | ಬಸವೇಶ್ವರರು ಸಂಗಮಕ್ಕೆ ತೆರಳಿದರು. |
| ೧೬೭ | ಹರಳಯ್ಯ ಮಧುವಯ್ಯ ಶೀಲವಂತಯ್ಯಗಳ ಮರಣದಂಡನೆ ಕಾರ್ಯಗತವಾದುದು. |
| ,, | ಶರಣರು ಕಲ್ಯಾಣದಿಂದ ವಲಸೆ ಹೊರಟರು. |
| ,, | ಬಿಜ್ಜಳರಾಜನ ಕೊಲೆ |
| ,, | ಕೂಡಲಸಂಗಮದಲ್ಲಿ ಬಸವಣ್ಣನವರ ಲಿಂಗೈಕ್ಯ |
| ೧೬೭-೬೮ | ಏರಿ ಬರುವ ಕಲಚೂರ್ಯ ಸೈನ್ಯದೊಡನೆ ಶರಣದಳದ ಹೋರಾಟ. |
| ೧೬೯ | ಉಳವಿಯಲ್ಲಿ ವಸಪಾತು ಸ್ಥಾಪನೆ. |
| ೧೭೦ | ಚೆನ್ನಬಸವಣ್ಣನವರು ಲಿಂಗೈಕ್ಯರಾದುದು. |
| ೧೮೦ | ವಣ್ಣೆಹೊಳೆ ಆಶ್ರಮದಲ್ಲಿ ಅಕ್ಕನಾಗಮ್ಮ ಲಿಂಗೈಕ್ಯವಾದುದು. |

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೩ | ೨೯ | ಅಂಳಕ್ಕೆ | ಅಂಗಳಕ್ಕೆ |
| ೪ | ೪ | ಅವರಿಂದ | ಅದರಿಂದ |
| ೪ | ೧೪ | ನಾಗಲಾಂಕೆಂಬಿಯು | ನಾಗಲಾಂಬಿಕೆಯು |
| ೫ | ೨೨ | ಳೆಯುನ | ಗೆಳೆಯುನ |
| ೧ | ೨೬ | ಂಧಶ್ರದ್ಧೆ | ಅಂಧಶ್ರದ್ಧೆ |
| ೨೨ | ೨೧ | ತೆರೆಯ್ಯಿಸಿದೆ | ತೆರೆಯಿಸಿದೆ |
| ೨೩ | ೮ | ಸಾ ಮಾನ್ಯನಲ್ಲಿ | ಸಾಮಾನ್ಯ-ಲ್ಲ |
| ೨೭ | ೧೭ | ಸ್ವಪ್ರೋಕ್ತಿ ಳಿಂವ | ಸ್ವಪ್ರೋಕ್ತಿಗಳಿಂದ |
| ,, | ೨೦ | ಉಂಟಾಗುವ | ಉಂಟಾಗುವ |
| ೩೩ | ೧ | ಜೀವಾತ್ಯರ | ಜೀವಾತ್ಮರ |
| ,, | ೭ | ಬಂ ಭ್ರಾಂತು | ಬಂದು ಒಳಲಿಸುವ ಭ್ರಾಂತು |
| ೩೭ | ೨೫ | ಕಾರ್ಯಕಲಾಪಳಿಗೆ | ಕಾರ್ಯಕಲಾಪಗಳಿಗೂ |
| ೪೧ | ೭ | ಭಾಗ | ಭಾಗ್ಯ |
| ,, | ೨೫ | ಳನೆಯ ದರ್ಭವನ್ನು | ಳನೆಯು ಸಂಪಾದನೆ ಈ ಸಂದರ್ಭವನ್ನು |
| ೪೨ | ೧ | ದೈಚಾರಿಕ | ವೈಚಾರಿಕ |
| ೪೬ | ೧೩ | ಭ ವಿಸಬೇಕು | ಭಾವಿಸಬೇಕು |
| ,, | ೧೪ | ಭಾವಾದ್ವೈತಂ | ಭಾವಾದ್ವೈತಂ |
| ೪೬ | ೨೩ | ಅನುಭವಳನ್ನು | ಅನುಭವಗಳನ್ನು |
| ೪೭ | ೧೬ | ಪುತದ | ಮತದ |
| ೪೮ | ೧೨ | ಣದಲ್ಲಿರುವ | ಕಲ್ಯಾಣವಲ್ಲಿರುವ |
| ೪೯ | ೧೧ | ಕಟ್ಟಿದರೆ | ಕಟ್ಟಿದರೆ |
| ೫೦ | ೧೬ | ಜ ಮದ | ಜಂಗಮದ |
| ,, | ೧೮ | ಬಸವನಿಗೆ | ಬಸವಣ್ಣನಿಗೆ |
| ,, | ೧೯ | ಗುಹೇಶ್ವರನ | ಗುಹೇಶ್ವರನು |
| ೫೧ | ೪ | ಮಾವುಗೆಯು | ಚಮ್ಮಾವುಗೆಯು |
| ೫೨ | ೧೭ | ಅವರೆಂದರು | ಅವರೆಂದರು |
| ,, | ೨೧ | ದೋಡಿ | ನೋಡಿ |
| ೫೭ | ೧೯ | ಬದುಕಿದರೇನು | ಬದುಕಿದೆನು |

| | | | |
|---|---|---|---|
| ೫೯ | ೧೮ | ಂದನೆಗೈದರು | ವಂದನೆಗೈದರು |
| ೬೪ | ೪ | ತರುವದ | ತರುವದು? |
| ,, | ೬೦ | ತರಣರು | ಶರಣರು |
| ೬೬ | ೩೧ | ಸೇವೆಯಲ್ಲಿ | ಸೇವೆಯಲ್ಲಿದ್ದವನು. |
| ೬೭ | ೧೧ | ಮವಮಾಡಿಬಂದವು | ಮಾಡಿಬಂದವು. |
| ,, | ೧೫ | ರಾಜಸೇಹೆಯಲ್ಲಿ | ರಾಜಸೇವೆಯಲ್ಲಿ |
| ೭೦ | ೧೩ | ಹೋಗಿರಿ | ಹೋಗಲಿ |
| ೪ | ೧೮ | ಓ ದನು | ಓದಿದನು. |
| ೭೫ | ೯ | ಸತ್ಯ | ಸತ್ಯದ |
| ೭೭ | ೧೧ | ಮಾಚಯ್ಯನವರು | ಕಂಡಮಾಚಯ್ಯನವರು |
| ,, | ೨೩ | ಗೆಳೆಯಲಿಲ್ಲ | ಅಲ್ಲಗೆಳೆಯಲಿಲ್ಲ |
| .. | ೨೪ | ವು | ಲಿಲ್ಲ. ತಾವು |
| .. | ೨೯, ೩೦ | | ಇಲ್ಲ |
| ೮೦ | ೨೧ | ಸೇರಿದನು. | ಸೇರಿಸಿದನು. |
| ೮೫ | ೨೧ | ಒಪುದು ತಪುದು | ಒಪ್ಪುದು ತಪ್ಪುದು |
| ೮೬ | ೨೩ | ಪೂಜ್ಯಗಳಿಗೆ | ಪೂಜ್ಯಳಿಗೆ |
| ೯೩ | ೧೫ | ಹರಹರದುಹಾದೇವ | ಹರಹರಮಹಾದೇವ |
| ೯೫ | ೧೩ | ಚಿಂ | ಚಿಂತೆ |
| ೯೬ | ೨೯ | ಬ ಹಮುಖ | ಬಹುಮುಖ |
| ೯೮ | ೧೪ | ಇದುವರೆಗೆ | ಇದುವರೆಗೆಹೇಳಿದ |
| ೧೦೪ | ೨೨ | ವಚ | ವಚನ |
| ೧೦೫ | ೩ | ಕೆಟ್ಟತ್ತು | ಕೆಟ್ಟಿತ್ತು. |
| ೧೦೮ | ೨ | ಮೈದೋ ತು | ಮೈದೋರಿತು |
| ೧೧೦ | ೨೩ | ರಮ | ಪರಮ |
| ೧೧೨ | ೯ | ಸಂಪ ದಾಯ | ಸಂಪ್ರದಾಯ |
| ,, | ೨೭ | ಜ್ಞಾಸು | ಜಿಜ್ಞಾಸು |
| ,, | ೨೮ | ಕ್ಕಿಕ್ಕಿ | ಪ್ರತಿಕ್ಕಿಕ್ಕಿ |
| ೧೧೩ | ೧೪ | ನಮ್ಮ | ದರು. ನಮ್ಮ |
| ೧೧೪ | ೯ | ಲೆ | ಮೇಲೆ |
| ,, | ೧೭ | ನದೀಪ್ತಿ | ಜ್ಞಾನದೀಪ್ತಿ |

# ಶ್ರೀ ಲಕ್ಕಪ್ಪ ಶಿರಹಟ್ಟಿ ಅವರ ಕೃತಿಗಳು

-‡‡‡-

**ಕಾವ್ಯ:**

೧] ನೀತಿ ಮುಕ್ತಾವಲಿ (ನೈತಿಕ ಖಂಡಕಾವ್ಯ)
೨] ನೂರೊಂದು ನೆಲೆಯ ನಿಲವು (ಷಟ್‌ಸ್ಥಲ ತತ್ವಕಾವ್ಯ)
೩] ಲಿಂಗರಾಜ ವಿಜಯ (ಚಾರಿತ್ರಿಕ ಕಾವ್ಯ)

**ಐತಿಹಾಸಿಕ ಕೃತಿಗಳು:**

೪] ಚಿತ್ತೂರಿನ ಪುನರುದ್ಧಾರ (ಕತೆ)
೫] ಕನ್ನಡಿಗನ ಕಲಿತನ (ನಾಟಕ)
೬] ಬಯಲಾದ ಸಂಚು (ನೀಳ್ಗತೆ)
ಪ್ರಕಾಶನ: ಅರವಿಂದ ಗ್ರಂಥಮಾಲೆ ಗದಗ.
೭] ಬಸವನ ಬಾಗೇವಾಡಿಯ ಕ್ಷೇತ್ರದರ್ಶನ
ಪ್ರಕಾಶನ: ಬಸವೇಶ್ವರ ದೇವಾಲಯ ಸಂಸ್ಥೆ. ಬ. ಬಾಗೇವಾಡಿ.

**ಮಹಾತ್ಮರ ಜೀವನ ಚರಿತ್ರೆ:**

೮] ಶ್ರೀ ಸಿದ್ಧರಾಮೇಶ್ವರ ಚರಿತ್ರೆ
೯] ಯೋಗಿರಾಜ ವಿಜಯ
ಪ್ರಕಾಶನ: ಹಾಲಕೇರಿಯ ವಿರಕ್ತಮಠ
೧೦] ಬಸವರಾಜ ದೇವರು
ಪ್ರಕಾಶನ: ಶ್ರೀ ಶಿ. ಸ್ವಾ. ಬಸವೇಶ್ವರ ಲಿಂ. ಚಾ. ಸಂಸ್ಥೆ, ವಿಜಾಪುರ.
೧೧] ಕ್ರಾಂತಿ ಗಂಗೋತ್ರಿ
ಪ್ರಕಾಶನ: ಶಿವಶಕ್ತಿ ಪ್ರಕಾಶನ. ರಾಯಚೂರ.
೧೨[ ಕಾಯಕ ವೀರ
ಪ್ರಕಾಶನ: ಅರುಣೋದಯ ಪ್ರಕಾಶನ, ವಿಜಾಪುರ.
೧೩] ಧರ್ಮದರ್ಶಿ
ಪ್ರಕಾಶನ: ಅರುಣೋದಯ ಪ್ರಕಾಶನ, ವಿಜಾಪುರ.

**ಅನುವಾದ:**

೧೪] ಶಿವಾದ್ವೈತಸಿದ್ಧಾಂತ
ಪ್ರಕಾಶನ: ಅರುಣೋದಯ ಪ್ರಕಾಶನ, ವಿಜಾಪುರ.